# ನಮಾಝ್ ಮತ್ತು ಉಪವಾಸ ವ್ರತ

(ಖುತ್‌ಬಾತ್ ಭಾಗ 3)

ಸಯ್ಯದ್ ಅಬುಲ್ ಆಲಾ ಮೌದೂದಿ

ಪರಮ ದಯಾಮಯನೂ ಕೃಪಾಶೀಲನೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಇಪ್ಪತ್ತನೆಯ ಶತಮಾನದ ಜಗದ್ವಿಖ್ಯಾತ ವಿದ್ವಾಂಸ ಮೌಲಾನಾ ಸಯ್ಯಿದ್ ಅಬುಲ್ ಆಲಾ ಮೌದೂದಿಯವರ 'ಖುತ್‌ಬಾತ್' ಎಂಬ ಗ್ರಂಥದ ಮೂರನೆಯ ಭಾಗವಾದ 'ಹಕೀಕತೆ ಸೌಮ್ ವ ಸಲಾತ್'ನ ಕನ್ನಡಾನುವಾದ ನಿಮ್ಮ ಕೈಯಲ್ಲಿದೆ. ಇದು ಲೇಖಕರು 1938ರಲ್ಲಿ ಅಂದಿನ ಅವಿಭಜಿತ ಪಂಜಾಬಿನ ಪಠಾಣ್ ಕೋಟ್‌ನ ಸಮೀಪದ ಗ್ರಾಮದ ಮುಸ್ಲಿಮರಲ್ಲಿ ಧಾರ್ಮಿಕ ಪ್ರಜ್ಞೆ ಮೂಡಿಸಲು ಮಾಡಿದ 'ಶುಕ್ರವಾರ ಪ್ರವಚನ'ಗಳ ಸಂಕಲನವಾಗಿದೆ. ಇಸ್ಲಾಮಿನ ಆಧಾರ ಸ್ತಂಭ ಗಳಾದ ನಮಾಝ್ ಮತ್ತು ಉಪವಾಸ ವ್ರತಗಳ ಅರ್ಥ ವ್ಯಾಪ್ತಿ ಮತ್ತು ಅದರ ಬೇಡಿಕೆಗಳನ್ನು ಸರಳವಾಗಿ ಉದಾಹರಣೆಗಳೊಂದಿಗೆ ಮನಮುಟ್ಟುವಂತೆ ವಿವರಿಸುವ ಶೈಲಿಯನ್ನು ಅವರು ಇದರಲ್ಲಿ ಅಳವಡಿಸಿದ್ದಾರೆ. ಅವರ 'ಶುಕ್ರವಾರ ಪ್ರವಚನ'ಗಳ ಇತರ ಭಾಗ ಗಳಾದ ಈಮಾನ್, ಇಸ್ಲಾಮ್, ಝಕಾತ್, ಹಜ್ಜ್ ಮತ್ತು ಜಿಹಾದ್ ಗಳೆಲ್ಲದರಲ್ಲೂ ಅವರು ಇದೇ ಶೈಲಿಯನ್ನು ಅನುಸರಿಸಿದ್ದಾರೆ. ಇಪ್ಪತ್ತನೆಯ ಶತಮಾನದಲ್ಲಿ ಉಪ ಭೂಖಂಡದಲ್ಲಿ ಇಸ್ಲಾಮೀ ನವೋತ್ಥಾನಕ್ಕೆ ಕಾರಣವಾದ ಅವರ ಬರಹದ ಪ್ರಭಾವ ಪೂರ್ಣತೆ ಈ ಸರಳ ಕೃತಿಯಲ್ಲೂ ವಾಚಕರ ಗಮನಕ್ಕೆ ಬಾರದೆ ಇರಲಾರದು.

ಈ ಕೃತಿ ಮತ್ತು ಇದರ ಇತರ ಭಾಗಗಳೂ ವೈಯಕ್ತಿಕ ವಾಚನಕ್ಕೆ ಉಪ ಯುಕ್ತವಾಗಿರುವಂತೆಯೇ ಮಸೀದಿ, ಮದ್ರಸಾ ಮತ್ತು ಸಭೆಗಳಲ್ಲಿ ಪಠಿಸುವುದಕ್ಕೂ ಉಪಯುಕ್ತವಾಗಿವೆ. ಉರ್ದು ಮತ್ತು ಇತರ ಅನುವಾದಿತ ಭಾಷೆಗಳಲ್ಲಿ ಲಕ್ಷಾಂತರ ಜನರಲ್ಲಿ ಜನಪ್ರಿಯವಾಗಿರುವ ಈ ಕೃತಿ ಕನ್ನಡ ಬಲ್ಲ ಮುಸ್ಲಿಮ್-ಮುಸ್ಲಿಮೇತರ ರೆಲ್ಲರಿಗೂ ಉಪಯುಕ್ತವಾಗಲೆಂದು ಇದನ್ನು ಸಮರ್ಪಿಸುತ್ತಿದ್ದೇವೆ. ಇದು ಈ ಪುಸ್ತಕದ ಏಳನೆಯ ಆವೃತ್ತಿ. ಮರ್ಹೂಮ್ ಅಬ್ದುಲ್ ಗಫ್ಫಾರ್ ಅವರು ಇದನ್ನು ಸರಳ ಸುಂದರವಾಗಿ ಕನ್ನಡೀಕರಿಸಿದ್ದಾರೆ. ಇದನ್ನು ಆಗು ಮಾಡಿದ ಸರ್ವಶಕ್ತನಾದ ಅಲ್ಲಾಹನಿಗೆ ಸರ್ವಸ್ತುತಿ. ಅಂತೆಯೇ ಈ ನಿಟ್ಟಿನಲ್ಲಿ ಸಹಕರಿಸಿದ ಎಲ್ಲರಿಗೂ ನಾವು ಋಣಿಯಾಗಿದ್ದೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# ಇಬಾದತ್

ಮುಸ್ಲಿಮ್ ಸಹೋದರರೇ,

ಹಿಂದಿನ ಉಪನ್ಯಾಸದಲ್ಲಿ ದೀನ್ (ಧರ್ಮ) ಮತ್ತು ಶರೀಅತ್ (ಧರ್ಮಶಾಸ್ತ್ರ) ಎಂಬ ಪದಗಳ ಅರ್ಥ ವಿವರಣೆ ಮಾಡಿದ್ದೆ. ಇಂದು ನಾನು ಮುಸ್ಲಿಮರೆಲ್ಲರೂ ಸರ್ವ ಸಾಮಾನ್ಯವಾಗಿ ಬಳಸುತ್ತಿದ್ದರೂ, ಕೆಲವೇ ಮಂದಿ ಮಾತ್ರ ಅದರ ನಿಜವಾದ ಅರ್ಥವನ್ನು ತಿಳಿದಿರುವಂತಹ ಇನ್ನೊಂದು ಪದದ ಅರ್ಥ ವಿವರಣೆಯನ್ನು ನೀಡಬಯಸುವೆನು. ಅದುವೇ 'ಇಬಾದತ್' ಎಂಬ ಪದವಾಗಿದೆ.

ಅಲ್ಲಾಹನು ಹೀಗೆ ಹೇಳಿದ್ದಾನೆ, "ನಾನು ಜಿನ್ನ್ (ಯಕ್ಷ) ಮತ್ತು ಮಾನವರನ್ನು ನನ್ನ 'ಇಬಾದತ್'ಗಾಗಿ ಅಲ್ಲದೆ ಬೇರಾವ ಉದ್ದೇಶಕ್ಕಾಗಿಯೂ ಸೃಷ್ಟಿಸಲಿಲ್ಲ" **(ಪವಿತ್ರ ಕುರ್‌ಆನ್: 51: 56)** ಇದರಿಂದ ನಿಮ್ಮ ಸೃಷ್ಟಿ ಹಾಗೂ ಜೀವನದ ಉದ್ದೇಶವು ಅಲ್ಲಾಹನ ಇಬಾದತ್‌ನ ಹೊರತು ಬೇರೇನೂ ಅಲ್ಲವೆಂದು ತಿಳಿಯುತ್ತದೆ. ಹೀಗಿರುವಾಗ ನೀವು ಇಬಾದತ್ ಎಂಬುದರ ಅರ್ಥ ಚೆನ್ನಾಗಿ ತಿಳಿದಿರಬೇಕಾದುದು ಎಷ್ಟೊಂದು ಅಗತ್ಯವೆಂಬುದನ್ನು ಊಹಿಸಬಹುದು. ಅದರ ಸರಿಯಾದ ಅರ್ಥ ತಿಳಿಯದೇ ಹೋದರೆ ನಿಮ್ಮನ್ನು ಸೃಷ್ಟಿಸಿದುದರ ಉದ್ದೇಶವನ್ನೇ ಪೂರ್ತಿಗೊಳಿಸಲಾರಿರಿ. ಉದ್ದೇಶ ನೆರವೇರದ ವಸ್ತು ನಿಷ್ಪ್ರಯೋಜಕವಾಗಿ ಬಿಡುತ್ತದೆ. ವೈದ್ಯನು ರೋಗವನ್ನು ಗುಣಪಡಿಸಲಾರದೆ ಹೋದಾಗ ಅವನು ಔಷಧೋಪಚಾರ ಕಾರ್ಯದಲ್ಲಿ ವಿಫಲನಾದನೆನ್ನುತ್ತೇವೆ. ಕೃಷಿಕನು ಬೆಳೆ ಬೆಳೆಸಲಾರದೆ ಹೋದಾಗ ಅವನು ಬೇಸಾಯದಲ್ಲಿ ವಿಫಲನಾದನೆನ್ನುತ್ತೇವೆ. ಅದೇ ರೀತಿಯಲ್ಲಿ ನೀವು ನಿಮ್ಮ ಜೀವನದ ನಿಜವಾದ ಉದ್ದೇಶವನ್ನು ಪೂರ್ತಿಗೊಳಿಸದೆ ಹೋದಾಗ ಇಡೀ ಜೀವನದಲ್ಲಿ ವಿಫಲರಾದಿರೆಂದೇ ಹೇಳಬೇಕಾಗುತ್ತದೆ. ಆದ್ದರಿಂದ ನೀವು 'ಇಬಾದತ್'ನ ತಾತ್ಪರ್ಯವನ್ನು ಚೆನ್ನಾಗಿ ಗ್ರಹಿಸಿ ತಿಳಿದು ಕೊಳ್ಳಬೇಕು ಮತ್ತು ಅದನ್ನು ಹೃದಯದಲ್ಲಿ ಇರಿಸಿಕೊಳ್ಳಬೇಕೆಂದು ವಿನಂತಿಸುತ್ತೇನೆ. ಏಕೆಂದರೆ ನಿಮ್ಮ ಜೀವನದ ಸಾರ್ಥಕತೆ ಅಥವಾ ನಿರರ್ಥಕತೆಯು ಇದನ್ನೇ ಹೊಂದಿಕೊಂಡಿದೆ.

## ಇಬಾದತ್‌ನ ಅರ್ಥ

ಇಬಾದತ್ ಎಂಬ ಪದವು 'ಅಬ್ದ್' ಎಂಬ ಅರಬಿ ಮೂಲದಿಂದ ಹೊರಟಿದೆ. 'ಅಬ್ದ್' ಎಂದರೆ ದಾಸ ಅಥವಾ ಗುಲಾಮ. ಆಗ 'ಇಬಾದತ್'ನ ಅರ್ಥ ದಾಸ್ಯ ಆರಾಧನೆ ಅಥವಾ ಗುಲಾಮಗಿರಿ ಎಂದಾಗುತ್ತದೆ. ಒಬ್ಬನು ಇನ್ನೊಬ್ಬನ ದಾಸನಾಗಿದ್ದು ಅವನ ಸೇವೆಯನ್ನು ದಾಸ್ಯಭಾವದಿಂದಲೇ ಮಾಡಿದರೆ ಹಾಗೂ ಒಡೆಯನೊಂದಿಗೆ ಹೇಗೆ ವ್ಯವಹರಿಸಬೇಕೋ ಹಾಗೆಯೇ ವ್ಯವಹರಿಸಿದರೆ ಅದನ್ನು ದಾಸ್ಯ ಅಥವಾ ಇಬಾದತ್ ಎನ್ನುತ್ತಾರೆ. ಇದಕ್ಕೆ ವ್ಯತಿರಿಕ್ತವಾಗಿ ಒಬ್ಬನು ಇನ್ನೊಬ್ಬನ ದಾಸನಾಗಿದ್ದು ಅವನಿಂದ ಸಂಬಳ ಪಡೆಯುತ್ತಿದ್ದೂ ಅವನೊಂದಿಗೆ ದಾಸನಂತೆ ವ್ಯವಹರಿಸದಿದ್ದರೆ ಅದನ್ನು ಅವಿಧೇಯತೆ, ಉದ್ಧಟತನ ಮಾತ್ರವಲ್ಲ ಕೃತಘ್ನತೆ ಎಂದೂ ಹೇಳುತ್ತಾರೆ.

ಒಡೆಯನ ಮುಂದೆ ದಾಸನಂತೆ ನಡೆಯುವ ಕ್ರಮ ಹೇಗೆಂದು ನೋಡೋಣ. ದಾಸನ ಒಂದನೆಯ ಕರ್ತವ್ಯವೇನೆಂದರೆ ಒಡೆಯನನ್ನು ಒಡೆಯನೆಂದು ಅಂಗೀಕರಿಸಿ ರಕ್ಷಕ, ಮೇಲ್ವಿಚಾರಕನಾದ ಆ ಒಡೆಯನೊಂದಿಗೆ ಪ್ರಾಮಾಣಿಕತೆಯಿಂದ ವರ್ತಿಸುವುದು ಮತ್ತು ತನ್ನ ಈ ವರ್ತನೆಗೆ ಇನ್ನಾರೂ ಅರ್ಹರಲ್ಲವೆಂದು ಭಾವಿಸುವುದು.

ಅವನ ಎರಡನೆಯ ಕರ್ತವ್ಯವೇನೆಂದರೆ ಸದಾ ಒಡೆಯನ ಆಜ್ಞಾನುಸರಣೆ ಮಾಡುವುದು, ಅವನ ಅಪ್ಪಣೆಯಂತೆ ನಡೆಯುವುದು, ಅವನಿಗೆ ಅವಿಧೇಯತೆ ತೋರಿಸದಿರುವುದು, ಅವನ ವಿರುದ್ಧ ತನ್ನ ಮನಸ್ಸಿನಲ್ಲಿ ಯಾವುದೇ ದುರಭಿಪ್ರಾಯ ಗಳನ್ನಿರಿಸದಿರುವುದು, ಅವನ ವಿರುದ್ಧ ಇತರರ ಮಾತಿನಂತೆ ನಡೆಯದಿರುವುದು. ದಾಸನು ಸದಾ ದಾಸನಾಗಿಯೇ ಇರುತ್ತಾನೆ, "ನಾನು ನಿಮ್ಮ ಆ ಮಾತನ್ನು ಕೇಳು ವೆನು; ಈ ಮಾತನ್ನು ಕೇಳಲಾರೆ" ಅಥವಾ "ಇಷ್ಟು ಹೊತ್ತಿನ ವರೆಗೆ ನಾನು ನಿಮ್ಮ ದಾಸ; ಉಳಿದ ಸಮಯ ನಿಮ್ಮ ದಾಸ್ಯದಿಂದ ಮುಕ್ತನು" ಎಂದು ಒಡೆಯ ನೊಡನೆ ಹೇಳುವ ಹಕ್ಕು ದಾಸನಿಗಿಲ್ಲ.

ಅವನ ಮೂರನೆಯ ಕರ್ತವ್ಯವೇನೆಂದರೆ ಒಡೆಯನನ್ನು ಗೌರವಾದರಗಳಿಂದ ಕಾಣುವುದು, ಅವನನ್ನು ಹೇಗೆ ಸನ್ಮಾನಿಸಬೇಕೆಂಬುದನ್ನು ಅರಿತು ಅದರಂತೆ ಅನುಸರಿಸುವುದು, ಅವನ ಮುಂದೆ ಉಪಾಸನೆಗಾಗಿ ಹಾಜರಾಗಬೇಕಾದ ಸಮಯ ವನ್ನು ತಿಳಿದುಕೊಂಡು ಕ್ಲಪ್ತ ಸಮಯದಲ್ಲಿ ತಪ್ಪದೆ ಹಾಜರಾಗುವುದು. ಹೀಗೆ ಒಡೆಯನ ಅತ್ಯಂತ ವಿಧೇಯ ದಾಸನೆಂಬುದನ್ನು ಕಾರ್ಯತಃ ತೋರಿಸಿ ಕೊಡುವುದು.

ಈ ಮೂರು ವಿಷಯಗಳು ಒಟ್ಟಾಗಿ ಇಬಾದತ್ ಎನಿಸುತ್ತದೆ. ಒಂದನೆಯದು ಒಡೆಯನಿಗೆ ಪ್ರಾಮಾಣಿಕನಾಗಿರುವುದು. ಎರಡನೆಯದು ಅವನ ಆಜ್ಞಾನುಸರಣೆ ಮಾಡುವುದು. ಮೂರನೆಯದು ಅವನ ಬಗ್ಗೆ ಪೂಜ್ಯಭಾವನೆ ಇರಿಸುವುದು.

“ನಾನು ಜಿನ್ನ್ ಮತ್ತು ಮಾನವರನ್ನು ನನ್ನ ಇಬಾದತ್‌ಗಾಗಿ ಅಲ್ಲದೆ ಬೇರಾವ ಉದ್ದೇಶಕ್ಕಾಗಿಯೂ ಸೃಷ್ಟಿಸಲಿಲ್ಲ” ಎಂಬ ದೇವವಾಕ್ಯದ ತಾತ್ಪರ್ಯವೇನೆಂದರೆ ಜಿನ್ನ್ ಮತ್ತು ಮಾನವರು ಅಲ್ಲಾಹನಿಗೆ ಮಾತ್ರ ಪ್ರಾಮಾಣಿಕರಾಗಿದ್ದು ಅವನಿಗೆದುರಾಗಿ ಇತರ ಯಾರಿಗೂ ಕೃತಜ್ಞರಾಗದಿರುವುದು. ಕೇವಲ ಅಲ್ಲಾಹನ ಆಜ್ಞಾಪಾಲನೆಯನ್ನೇ ಮಾಡುತ್ತಿದ್ದು ಅವನಿಗೆದುರಾಗಿ ಇತರ ಯಾರದೇ ಆಜ್ಞಾಪಾಲನೆ ಮಾಡದಿರುವುದು ಮತ್ತು ಅವನ ಮುಂದೆ ಮಾತ್ರ ಪೂಜ್ಯಭಾವದಿಂದ ತಲೆಬಾಗಿರುವುದು, ಇತರ ಯಾರ ಮುಂದೆಯೂ ಬಾಗದಿರುವುದು. ಈ ಮೂರು ವಿಷಯಗಳನ್ನೇ ಒಟ್ಟಾಗಿ 'ಇಬಾದತ್' ಎಂದು ಹೇಳಲಾಗುತ್ತದೆ. ಅಲ್ಲಾಹನು ತನ್ನ ಇಬಾದತ್‌ನ ಆಜ್ಞೆಗಳನ್ನಿತ್ತಿರುವ ಎಲ್ಲಾ ಆಯತ್‌ಗಳ ತಾತ್ಪರ್ಯವೂ ಇದೇ. ಪ್ರವಾದಿವರ್ಯರ(ಸ) ಮತ್ತು ಅವರಿಗಿಂತ ಹಿಂದೆ ಅಲ್ಲಾಹನ ಕಡೆಯಿಂದ ಬಂದ ಎಲ್ಲ ಪ್ರವಾದಿಗಳ ಶಿಕ್ಷಣದ ಸಾರವು “ಅಲ್ಲಾಹನ ಹೊರತು ಇನ್ನಾರ ಇಬಾದತನ್ನೂ ಮಾಡಬೇಡಿರಿ” ಎಂದಾಗಿದೆ. ಅರ್ಥಾತ್ ನೀವು ಪ್ರಾಮಾಣಿಕರಾಗಿರಬೇಕಾದ ಸಾರ್ವಭೌಮನು ಒಬ್ಬನೇ; ಆ ಸಾರ್ವಭೌಮನೇ ಅಲ್ಲಾಹ್. ನೀವು ಪಾಲಿಸಬೇಕಾದ ಶಾಸನ ಒಂದೇ; ಅದು ಅಲ್ಲಾಹನ ಶಾಸನ. ನೀವು ಆರಾಧಿಸಬೇಕಾದುದು ಒಬ್ಬನನ್ನೇ; ಅವನು ಅಲ್ಲಾಹ್.

## ಇಬಾದತ್‌ನ ಬಗ್ಗೆ ತಪ್ಪು ಅರ್ಥ ಗ್ರಹಿಕೆಯ ಪರಿಣಾಮಗಳು

ಇಬಾದತ್‌ನ ಈ ತಾತ್ಪರ್ಯವನ್ನು ಗ್ರಹಿಸಿಕೊಂಡು ನನ್ನ ಒಂದೊಂದೇ ಪ್ರಶ್ನೆಗೆ ಈಗ ಉತ್ತರಿಸಿರಿ.

ಒಬ್ಬ ನೌಕರನು ತನ್ನ ಒಡೆಯನು ಹೇಳಿದ ಕೆಲಸ ಮಾಡುವುದನ್ನು ಬಿಟ್ಟು ಯಾವಾಗಲೂ ಅವನ ಮುಂದೆ ಕೈಕಟ್ಟಿ ನಿಂತು ಲಕ್ಷೋಪಲಕ್ಷ ಬಾರಿ ಅವನ ನಾಮವನ್ನು ಜಪಿಸುತ್ತಲೇ ಇದ್ದರೆ ಆ ನೌಕರನ ಬಗ್ಗೆ ನೀವೇನೆನ್ನುವಿರಿ?

ಒಡೆಯನು ಅವನಿಗೆ 'ಹೋಗು, ಇಂತಿಂತವರಿಗೆ ಸಲ್ಲಬೇಕಾದುದನ್ನು ಸಲ್ಲಿಸು' ಎಂದು ಅಪ್ಪಣೆ ಕೊಡುತ್ತಾನೆ. ಆದರೆ ಇವನು ಅಲ್ಲೇ ನಿಂತಿರುತ್ತಾನೆ. ಒಡೆಯನು ಇವನೊಡನೆ 'ಹೋಗು ಆ ಕೆಡುಕುಗಳನ್ನು ತೊಲಗಿಸು' ಎನ್ನುತ್ತಾನೆ. ಈ ಅಪ್ಪಣೆಯನ್ನು ಕೇಳಿ ಇವನು ಅಲ್ಲೇ ನಿಂತು ಅತ್ಯಂತ ಮಧುರ ಸ್ವರದಿಂದ 'ಕಳ್ಳನ ಕೈ ಕತ್ತರಿಸು, ಕಳ್ಳನ ಕೈ ಕತ್ತರಿಸು' ಎಂದು ಹತ್ತಾರು ಬಾರಿ ಆವರ್ತಿಸುತ್ತಿರುತ್ತಾನೆ. ಆದರೆ ಒಮ್ಮೆಯಾದರೂ ಕಳ್ಳನ ಕೈ ಕತ್ತರಿಸುವಂತಹ ಪದ್ಧತಿಯನ್ನು ಜಾರಿಗೆ ತರುವ ಪ್ರಯತ್ನ ಕೈಗೊಳ್ಳುವುದಿಲ್ಲ. ಈ ದಾಸನು ನಿಜವಾಗಿಯೂ ತನ್ನ ಒಡೆಯನ ಆರಾಧನೆ ಮಾಡುತ್ತಿರುವನೆಂದು ಹೇಳುವಿರಾ? ನಿಮ್ಮ ನೌಕರನೊಬ್ಬ ಹೀಗೆ ವರ್ತಿಸಿದಾಗ ನೀವು ಅವನೊಡನೆ ಏನು ಹೇಳುವಿರೆಂದು ನನಗೆ ಗೊತ್ತಿದೆ.

ಆದರೆ ಅಲ್ಲಾಹನ ದಾಸನೊಬ್ಬನು ಹೀಗೆ ಮಾಡಿದಾಗ ನೀವು ಅವನನ್ನು ಮಹಾ ನಿಷ್ಠಾವಂತನೆನ್ನುತ್ತೀರಿ. ಈ ಅಕ್ರಮಿಯು ಹಗಲಿರುಳೂ ಕುರ್‌ಆನಿನಲ್ಲಿ ಅಲ್ಲಾಹನ ಆಜ್ಞೆಗಳನ್ನು ಎಷ್ಟು ಬಾರಿ ಪಠಿಸುತ್ತಾನೆಂದು ಹೇಳಲಾಗದು. ಆದರೆ ಆ ಆಜ್ಞೆಗಳನ್ನು ಪಾಲಿಸಲಿಕ್ಕಾಗಿ ಅವನು ತನ್ನ ಸ್ಥಾನದಿಂದ ಕದಲಲಾರ. ಅದರ ಬದಲಿಗೆ ನಫಿಲ್‌ನ ಮೇಲೆ ನಫಿಲ್ (ಐಚ್ಛಿಕ) ನಮಾಝ್‌ಗಳನ್ನು ಮಾಡುತ್ತಲೇ ಇರುತ್ತಾನೆ. ಜಪಮಾಲೆಯನ್ನು ಸಾವಿರಾರು ಸಲ ತಿರುವಿ ಅಲ್ಲಾಹನ ನಾಮವನ್ನು ಜಪಿಸುತ್ತಾನೆ. ಮಧುರ ಕಂಠದಿಂದ ಪವಿತ್ರ ಕುರ್‌ಆನನ್ನು ಪಠಿಸುತ್ತಲೇ ಇರುತ್ತಾನೆ. ನೀವು ಅವನ ಈ ವರ್ತನೆಗಳನ್ನೆಲ್ಲಾ ಕಂಡು ಅವನನ್ನು ಒಬ್ಬ ನಿಷ್ಠಾವಂತ ದೇವಭಕ್ತನೆನ್ನುತ್ತೀರಿ. 'ಇಬಾದತ್' ಎಂಬುದರ ಸರಿ ಯಾದ ತಾತ್ಪರ್ಯ ತಿಳಿಯದಿರುವುದರಿಂದಲೇ ನೀವು ಈ ತರದ ತಪ್ಪು ಅಭಿಪ್ರಾಯ ತಾಳಲು ಕಾರಣವಾಯಿತು.

ಇನ್ನೊಬ್ಬ ನೌಕರನಿದ್ದಾನೆ. ಅವನು ಯಾವಾಗಲೂ ಬೇರೆಯವರ ಸೇವೆ ಮಾಡುತ್ತಾನೆ. ಇತರರ ಅಪ್ಪಣೆಗಳನ್ನು ಪಾಲಿಸುತ್ತಾನೆ. ಇತರರ ನಿಯಮ ನಿಬಂಧನೆಗಳನ್ನೆಲ್ಲಾ ಅನುಸರಿಸುತ್ತಾನೆ. ತನ್ನ ನಿಜವಾದ ಒಡೆಯನ ಆಜ್ಞೆಗೆ ಯಾವಾಗಲೂ ವಿರೋಧವಾಗಿಯೇ ನಡೆಯುತ್ತಾನೆ. ಆದರೆ ಆತನಿಗೆ ವಂದನೆ ಸಲ್ಲಿಸಬೇಕಾದ ಹೊತ್ತಿಗೆ ಹಾಜರಾಗಿ ಅವನ ನಾಮವನ್ನು ಜಪಿಸುತ್ತಾನೆ. ನಿಮ್ಮ ನೌಕರನು ಹೀಗೆ ವರ್ತಿಸಿದರೆ ನೀವೇನು ಮಾಡುವಿರಿ? ಅವನ ವಂದನೆ ಯನ್ನು ಅವನ ಮುಖಕ್ಕೇ ಎಸೆದು ಬಿಡಲಾರಿರಾ? ಅವನು ಬರಿ ನಾಲಗೆಯಿಂದ ನಿಮ್ಮನ್ನು ಕರೆಯುವಾಗ "ಎಲಾ, ನೀನು ಮಹಾ ಸುಳ್ಳ, ಮೋಸಗಾರ; ಸಂಬಳ ನನ್ನಿಂದ ಪಡೆದು ಅನ್ಯರ ಚಾಕರಿ ಮಾಡುತ್ತಿ. ಬಾಯಿಯಿಂದ ನನ್ನನ್ನು ಒಡೆಯ ನೆನ್ನುತ್ತೀ. ವಾಸ್ತವದಲ್ಲಿ ನನ್ನ ಹೊರತು ಇತರೆಲ್ಲರ ಸೇವೆ ಮಾಡುತ್ತೀ" ಎಂದು ಅವನೊಡನೆ ಹೇಳಲಾರಿರಾ? ಇದು ಓರ್ವ ಸಾಮಾನ್ಯ ಬುದ್ಧಿಯಿರುವವನಿಗೂ ತಿಳಿಯಬಹುದಾದ ವಿಷಯ. ಆದರೆ ಅಹೋರಾತ್ರಿ ಅಲ್ಲಾಹನ ನಿಯಮ ನಿಬಂಧನೆಗಳನ್ನು ಮುರಿಯುತ್ತಾ ಸತ್ಯನಿಷೇಧಿಗಳ ಹಾಗೂ ಬಹುದೇವಾರಾಧಕರ ಆಜ್ಞಾಪಾಲನೆ ಮಾಡುತ್ತಾ ತನ್ನ ಜೀವನದ ವ್ಯವಹಾರಗಳಲ್ಲೆಲ್ಲಾ ಅಲ್ಲಾಹನ ಆಜ್ಞೆಗಳ ಪರಿವೆಯೇ ಇಲ್ಲದವರು ಮಾಡುವ ನಮಾಝ್, ಉಪವಾಸ, ಜಪ, ಕುರ್‌ಆನ್ ಪಾರಾಯಣ, ಹಜ್ಜ್ ಯಾತ್ರೆ ಮತ್ತು ಝಕಾತ್‌ಗಳನ್ನು ಅಲ್ಲಾಹನ ಇಬಾದತ್ ಎಂದು ತಿಳಿಯುವುದು ಅದೆಷ್ಟು ಆಶ್ಚರ್ಯಕರ! ಈ ತಪ್ಪು ಧಾರಣೆಯೂ ಇಬಾದತ್‌ನ ನಿಜವಾದ ತಾತ್ಪರ್ಯ ತಿಳಿಯದ ಕಾರಣದಿಂದಲೇ ಆಗಿದೆ.

ಬೇರೊಬ್ಬ ನೌಕರನ ಉದಾಹರಣೆಯನ್ನು ತೆಗೆದುಕೊಳ್ಳಿರಿ. ಒಡೆಯನು ತನ್ನ ನೌಕರನಿಗೆ ನಿಶ್ಚಯಿಸಿದ ಸಮವಸ್ತ್ರವನ್ನು ಸರಿಯಾದ ಅಳತೆಯೊಂದಿಗೆ ಧರಿಸುತ್ತಾನೆ.

ಅವನು ಅತ್ಯಂತ ಪೂಜ್ಯಭಾವದಿಂದ ಆತನ ಪ್ರತಿಯೊಂದು ಅಪ್ಪಣೆಯನ್ನು ಕೇಳಿದೊಡನೆ ಬಾಗಿಕೊಂಡು ಅದಕ್ಕೆ 'ಸರ್ವಾತ್ಮನಾ' ಸಿದ್ಧನಿದ್ದೇನೆಂದು ಹೇಳುವಾಗ, ಅವನಿಗಿಂತ ಹೆಚ್ಚಿನ ಆಜ್ಞಾಪಾಲಕ ಇನ್ನೊಬ್ಬನಿಲ್ಲವೋ ಎಂಬಂತೆ ತೋರುತ್ತದೆ. ಆರಾಧನೆಯ ಸಮಯ ಸನ್ನಿಹಿತವಾದೊಡನೆ ಎಲ್ಲರಿಗಿಂತಲೂ ಮುಂದಾಗಿ ಬಂದು ನಿಂತು ಒಡೆಯನ ನಾಮವನ್ನು ಜಪಿಸುವುದರಲ್ಲಿ ಅಗ್ರಗಣ್ಯನೆನಿಸುತ್ತಾನೆ. ಆದರೆ ಆತನೇ ಇನ್ನೊಂದೆಡೆ ಒಡೆಯನ ಶತ್ರುಗಳು ಹಾಗೂ ಬಂಡುಗಾರರ ಸೇವೆ ಮಾಡುತ್ತಿರುತ್ತಾನೆ. ಆತನ ವಿರುದ್ಧ ಒಳಸಂಚು ನಡೆಸುವುದರಲ್ಲಿ ಭಾಗೀದಾರನಾಗುತ್ತಾನೆ. ಈ ಜಗತ್ತಿನಿಂದ ಆತನ ಹೆಸರನ್ನೇ ಅಳಿಸಿಬಿಡಬೇಕೆಂಬ ಪ್ರಯತ್ನದಲ್ಲಿರುವವರಿಗೆ ತನ್ನ ಸಹಕಾರ ನೀಡುತ್ತಾನೆ. ನಿಶಾಂಧಕಾರದಲ್ಲಿ ಒಡೆಯನ ಮನೆಗೆ ಕನ್ನ ಹಾಕಿ ದಿನ ಬೆಳಗಾದೊಡನೆ ಪ್ರಾಮಾಣಿಕ ಸೇವಕನಂತೆ ಕೈಕಟ್ಟಿ ಆತನ ಸನ್ನಿಧಿಯಲ್ಲಿ ಹಾಜರಾಗುತ್ತಾನೆ. ಇಂತಹ ಸೇವಕನ ಬಗ್ಗೆ ನೀವೇನೆನ್ನುವಿರಿ? ಇವನು ಮಹಾ ಕಪಟಿ, ಕೃತಘ್ನ ಮತ್ತು ಬಂಡುಗಾರನೆಂದೇ ಹೇಳುವಿರಷ್ಟೆ. ಆದರೆ ಇದೇ ತರದ ಅಲ್ಲಾಹನ ನೌಕರನನ್ನು ನೀವು ಏನೆಂದು ಕರೆಯುವಿರಿ? ಕೆಲವರನ್ನು 'ಪೀರ್ ಸಾಹೇಬ', ಇನ್ನು ಕೆಲವರನ್ನು 'ಹಝ್ರತ್ ಮೌಲಾನಾ' ಮತ್ತೆ ಕೆಲವರನ್ನು ಮುತ್ತಕೀ (ಧರ್ಮನಿಷ್ಠ, ಮಹಾಭಕ್ತ) ಎಂದಿತ್ಯಾದಿ ಕರೆಯುತ್ತೀರಿ. ಅವರನ್ನು ಹೀಗೆ ಕರೆಯಲು ಕಾರಣವಿಷ್ಟೆ. ನೀವು ಅವರ ಮುಖದ ಮೇಲೆ ಪೂರ್ಣ ಅಳತೆಯಲ್ಲಿ ಬೆಳೆದಿರುವ ಗಡ್ಡವನ್ನು, ಕಾಲ ಗಂಟಿಗಿಂತ ಎರಡೆರಡಂಗುಲ ಮೇಲಕ್ಕೆ ನಿಂತಿರುವ ಇಜಾರುಗಳನ್ನು, ನಮಾಝಿನಿಂದಾಗಿ ಅವರ ಹಣೆಯಲ್ಲಿ ಮೂಡಿದ ದಡ್ಡುಗಳನ್ನು, ಅವರ ಸುದೀರ್ಘ ನಮಾಝ್‌ಗಳನ್ನು ಮತ್ತು ಅವರ ಉದ್ದುದ್ದ ಜಪ ಮಾಲೆಗಳನ್ನು ನೋಡಿ ಅವರನ್ನು ಮಹಾ ಧಾರ್ಮಿಕರೂ ದೇವಭಕ್ತರೂ ಆಗಿದ್ದಾರೆಂದು ತಿಳಿದುಕೊಳ್ಳುತ್ತೀರಿ. ಈ ತಪ್ಪುಧಾರಣೆಯು 'ಇಬಾದತ್' ಮತ್ತು ಧಾರ್ಮಿಕತೆಯ ತಾತ್ಪರ್ಯಗಳನ್ನು ತಪ್ಪಾಗಿ ತಿಳಿದುಕೊಂಡುದರಿಂದಲೇ ನಿಮ್ಮಲ್ಲುಂಟಾಯಿತು.

ಕೈ ಕಟ್ಟಿ ಕಿಬ್ಲಾಭಿಮುಖವಾಗಿ ನಿಲ್ಲುವುದು, ಮೊಣಕಾಲುಗಳನ್ನು ಹಿಡಿದು ಬಾಗುವುದು, ನೆಲದಲ್ಲಿ ಕೈಗಳನ್ನೂರಿ ಸಜ್ದಾ (ಸಾಷ್ಟಾಂಗ) ಮಾಡುವುದು, ಕೆಲವು ನಿಶ್ಚಿತ ಪದಗಳನ್ನು ಉಚ್ಚರಿಸುವುದೇ ಮೊದಲಾದ ಕೆಲವು ಚಲನೆಗಳನ್ನೇ ನೀವು 'ಇಬಾದತ್' ಎಂದು ತಿಳಿದುಕೊಂಡಿದ್ದೀರಿ. ರಮಝಾನ್ ತಿಂಗಳ ಆರಂಭದ ದಿನದಿಂದ ಶವ್ವಾಲ್ ತಿಂಗಳ ಚಂದ್ರದರ್ಶನವಾಗುವ ತನಕ ದಿನಂಪ್ರತಿ ಮುಂಜಾವಿನಿಂದ ಸಂಜೆಯ ತನಕ ಹಸಿವು ಬಾಯಾರಿಕೆಗಳಿಂದ ಇರುವುದನ್ನು ನೀವು 'ಇಬಾದತ್' ಎಂದು ತಿಳಿಯುತ್ತೀರಿ. ಪವಿತ್ರ ಕುರ್‌ಆನಿನ ಕೆಲವು ಆಯತ್‌ಗಳನ್ನು ಬಾಯಿಯಿಂದ ಪಠಿಸಿ ಬಿಡುವುದನ್ನು ನೀವು 'ಇಬಾದತ್' ಎಂದು ಭಾವಿಸುತ್ತೀರಿ.

ಮಕ್ಕಾ ನಗರಕ್ಕೆ ಹೋಗಿ ಪವಿತ್ರ ಕಅಬಾದ ಪ್ರದಕ್ಷಿಣೆ ಮಾಡುವುದನ್ನು ನೀವು 'ಇಬಾದತ್' ಎಂದೆಣಿಸುತ್ತೀರಿ. ಹೀಗೆ ಕೆಲವು ನಿರ್ದಿಷ್ಟ ವಿಧಿಕರ್ಮಗಳ ಬಾಹ್ಯ ರೂಪಗಳಿಗೆ ಇಬಾದತ್ ಎಂಬ ಹೆಸರನ್ನಿಟ್ಟುಕೊಂಡಿರುತ್ತೀರಿ.

ಒಬ್ಬನು ಬಾಹ್ಯ ರೂಪಗಳೊಂದಿಗೆ ಅವುಗಳನ್ನು ಮಾಡಿದಾಗ ಅವನು ಅಲ್ಲಾಹನ ಇಬಾದತ್ ನೆರವೇರಿಸಿ ಬಿಟ್ಟನೆಂದೂ 'ಜಿನ್ನ್ ಮತ್ತು ಮಾನವರನ್ನು ನನ್ನ ಇಬಾದತ್‌ಗಾಗಿ ಅಲ್ಲದೆ ಬೇರಾವ ಉದ್ದೇಶಕ್ಕಾಗಿಯೂ ಸೃಷ್ಟಿಸಲಿಲ್ಲ'ವೆಂಬ ದೇವವಾಣಿಯಲ್ಲಿ ಹೇಳಲಾದ ಉದ್ದೇಶವನ್ನು ಪೂರ್ತಿಗೊಳಿಸಿ ಬಿಟ್ಟನೆಂದೂ ಇನ್ನು ಅವನು ತನ್ನ ಜೀವನದಲ್ಲಿ ತನ್ನಿಚ್ಛೆಯಂತೆ ಮಾಡಲು ಸ್ವತಂತ್ರನಾಗಿದ್ದಾನೆಂದೂ ಭ್ರಮಿಸುತ್ತೀರಿ.

## ಇಬಾದತ್: ಜೀವನದ ಎಲ್ಲ ರಂಗಗಳಲ್ಲಿ ದಾಸ್ಯ-ಅನುಸರಣೆ

ಆದರೆ ಅಲ್ಲಾಹನು ಯಾವ ಇಬಾದತ್‌ಗಾಗಿ ನಿಮ್ಮನ್ನು ಸೃಷ್ಟಿಸಿ ಅದರ ಆಜ್ಞೆಯನ್ನು ಮಾಡಿದ್ದಾನೋ ಅದು ಬೇರೆಯೇ ಆಗಿದೆ. ನಿಮ್ಮ ಜೀವನದಲ್ಲಿ ಪ್ರತಿ ಕ್ಷಣದಲ್ಲೂ ಎಲ್ಲಾ ಅವಸ್ಥೆಗಳಲ್ಲಿಯೂ ಅಲ್ಲಾಹನ ಆಜ್ಞಾಪಾಲನೆ ಮಾಡುವುದೂ ದೈವಿಕ ಕಾನೂನಿಗೆ ಎದುರಾದ ಎಲ್ಲ ಅನುಸರಣೆಗಳಿಂದ ಸಂಪೂರ್ಣ ವಿಮುಕ್ತರಾಗುವುದೂ ಆ ಅಪೇಕ್ಷಿತ ಇಬಾದತ್ ಆಗಿದೆ. ನಿಮ್ಮ ಪ್ರತಿಯೊಂದು ಚಲನೆಯೂ ಅಲ್ಲಾಹನು ನಿಮಗಾಗಿ ನಿಶ್ಚಯಿಸಿದ ಮೇರೆಯೊಳಗಿರಬೇಕು. ನಿಮ್ಮ ಪ್ರತಿಯೊಂದು ಕೆಲಸವೂ ಅಲ್ಲಾಹನು ನಿಮಗೆ ತೋರಿಸಿ ಕೊಟ್ಟ ಕ್ರಮಗಳಂತಿರಬೇಕು. ಈ ಪ್ರಕಾರ ನಡೆಸುವ ನಿಮ್ಮ ಜೀವನವು ಸರ್ವ ಸಂಪೂರ್ಣವಾಗಿ ಅಲ್ಲಾಹನ ಇಬಾದತ್ ಆಗುವುದು. ಇಂತಹ ಜೀವನದಲ್ಲಿ ನೀವು ಮಲಗುವುದು, ಏಳುವುದು, ತಿನ್ನುವುದು, ಕುಡಿಯುವುದು, ಚಲಿಸುವುದು, ಮಾತನಾಡುವುದು, ಹೆಚ್ಚೇಕೆ ನೀವು ನಿಮ್ಮ ಪತ್ನಿಯ ಜೊತೆ ಸರಸವಾಡುವುದು ಮತ್ತು ನಿಮ್ಮ ಮಗುವನ್ನು ಮುದ್ದಿಸುವುದು ಕೂಡ 'ಇಬಾದತ್' ಆಗಿರುತ್ತದೆ. ನೀವು ಲೌಕಿಕವೆನ್ನುವ ಈ ಕಾರ್ಯಗಳಲ್ಲೆಲ್ಲಾ ಅಲ್ಲಾಹನು ನಿಶ್ಚಯಿಸಿ ಕೊಟ್ಟ ಮೇರೆಗಳನ್ನು ಪಾಲಿಸಿಕೊಂಡು ಮಾಡಿದಾಗ ಅವು ಧಾರ್ಮಿಕ ಕಾರ್ಯ ಹಾಗೂ ಇಬಾದತ್ ಆಗುವುವು. ಜೀವನದ ಪ್ರತಿ ಹೆಜ್ಜೆಗೂ ನೀವು, ಅಲ್ಲಾಹನ ದೃಷ್ಟಿಯಲ್ಲಿ ಸರಿ ಯಾವುದು, ತಪ್ಪು ಯಾವುದು, ಹಲಾಲ್ (ಧರ್ಮಬದ್ಧ) ಯಾವುದು, ಹರಾಮ್ (ನಿಷಿದ್ಧ) ಯಾವುದು, ಯಾವುದನ್ನು ಕಡ್ಡಾಯ ಮಾಡಲಾಗಿದೆ, ಯಾವುದರಿಂದ ತಡೆಯಲಾಗಿದೆ, ಯಾವುದರಿಂದ ಅವನು ಸಂತುಷ್ಟನಾಗುವನು, ಯಾವುದರಿಂದ ಅವನು ಕೋಪಗೊಳ್ಳುವನು ಎಂಬಿತ್ಯಾದಿಗಳನ್ನು ಗಮನಿಸಬೇಕು. ಉದಾ: ನೀವು ಜೀವನ ನಿರ್ವಹಣೆಗಾಗಿ ಸಂಪಾದಿಸಲು ಹೊರಡುತ್ತೀರಿ. ಆಗ ನಿಷಿದ್ಧವಾದ ಸಂಪತ್ತು ಧಾರಾಳವಾಗಿ

ಅತ್ಯಂತ ಸುಲಭದಲ್ಲಿ ನಿಮ್ಮ ಕೈಸೇರುವ ಅನೇಕ ಸಂದರ್ಭಗಳು ಬರಬಹುದು. ಆದರೆ ನೀವು ಅಲ್ಲಾಹನ ಭಯದಿಂದ ಅಂತಹ ಸಂಪತ್ತಿಗೆ ಕೈಯೊಡ್ಡದೆ ಧರ್ಮಬದ್ಧವಾದುದನ್ನೇ ಗಳಿಸಿ ತಂದಾಗ, ನೀವು ಈ ಕೆಲಸಕ್ಕಾಗಿ ವ್ಯಯಿಸಿದ ಸಮಯವೆಲ್ಲಾ 'ಇಬಾದತ್' ಆಗುತ್ತದೆ. ಹೀಗೆ ಸಂಪಾದಿಸಿದ ಆಹಾರವನ್ನು ನೀವು ಸ್ವತಃ ಉಣ್ಣುತ್ತೀರಿ; ನಿಮ್ಮ ಹೆಂಡತಿ ಮಕ್ಕಳಿಗೂ ಮತ್ತು ಅಲ್ಲಾಹನು ನಿಶ್ಚಯಿಸಿದ ಇತರ ಹಕ್ಕುದಾರರಿಗೂ ಉಣಿಸುತ್ತೀರಿ. ಆಗ ಈ ಕಾರ್ಯಗಳಿಗೆಲ್ಲಾ ಪುಣ್ಯಫಲ ಪಡೆಯಲು ನೀವು ಅರ್ಹರಾದಿರಿ. ನೀವು ನಡೆಯುವಾಗ ದಾರಿಯಲ್ಲಿ ಬಿದ್ದಿರುವ ಕಲ್ಲು-ಮುಳ್ಳುಗಳನ್ನು ಕಂಡಾಗ ಅಲ್ಲಾಹನ ಇತರ ದಾಸರಿಗೆ ತೊಂದರೆಯಾಗ ಬಹುದೆಂದೆಣಿಸಿ ಅದನ್ನು ಎತ್ತಿ ದೂರ ಎಸೆದರೆ ಇದೂ ಇಬಾದತ್ ಎನಿಸುತ್ತದೆ.

ನೀವು ರೋಗಿಯ ಶುಶ್ರೂಷೆಗೈದರೆ, ಕುರುಡನಿಗೆ ದಾರಿಗಾಣಿಸಿದರೆ ಅಥವಾ ಕಷ್ಟದಲ್ಲಿದ್ದವರಿಗೆ ಸಹಾಯ ಮಾಡಿದರೆ ಇವೆಲ್ಲಾ ಇಬಾದತ್ ಎನಿಸುತ್ತವೆ. ನೀವು ಮಾತನಾಡುವಾಗ ಸುಳ್ಳು, ಪರದೂಷಣೆ, ನಿಂದೆ ಮತ್ತು ಇತರರ ಮನನೋಯಿಸುವ ಮಾತುಗಳಿಂದ ದೂರವಿದ್ದು ಅಲ್ಲಾಹನ ಭಯದಿಂದ ಸತ್ಯವನ್ನೇ ಆಡಿದರೆ ನೀವು ಕಳೆದ ಪ್ರತಿಕ್ಷಣವನ್ನು ಇಬಾದತ್‌ನಲ್ಲಿ ಕಳೆದಂತಾಗುವುದು.

ಒಟ್ಟಿನಲ್ಲಿ ನಿಮಗೆ ಬೋಧವರಿತಂದಿನಿಂದ ಕೊನೆಯುಸಿರಿನ ತನಕ ಅಲ್ಲಾಹನ ನಿಯಮ ನಿಬಂಧನೆಗಳನುಸಾರವಾಗಿ ಮತ್ತು ಅವನ ಆಜ್ಞೆಗಳಂತೆ ಜೀವನ ನಿರ್ವ ಹಿಸುವುದೇ ನೈಜ ಇಬಾದತ್ ಆಗಿದೆ. ಈ ಇಬಾದತ್‌ಗೆ ನಿಶ್ಚಿತ ಸಮಯವೆಂದಿಲ್ಲ. ಇದು ಸದಾ ಜರಗುತ್ತಿರಬೇಕಾದ ಇಬಾದತ್. ಈ ಇಬಾದತ್‌ಗೆ ನಿಶ್ಚಿತ ರೂಪವೂ ಇಲ್ಲ. ಪ್ರತಿಯೊಂದು ಕೆಲಸದಲ್ಲೂ ಪ್ರತಿಯೊಂದು ರೂಪದಲ್ಲೂ ಅಲ್ಲಾಹನಿಗೆ ಮಾತ್ರ ಇಬಾದತ್ ಆಗಬೇಕು. ಸ್ವಲ್ಪ ಹೊತ್ತಿಗೆ ನಾನು ಅಲ್ಲಾಹನ ದಾಸನು; ಉಳಿದ ಹೊತ್ತಿಗೆ ಅಲ್ಲಾಹನ ದಾಸನಲ್ಲವೆಂದು ನೀವು ಹೇಳಲಾರಿರಷ್ಟೆ. ಅದೇ ರೀತಿಯಲ್ಲಿ ಇದು ಅಲ್ಲಾಹನ ಇಬಾದತ್‌ನ ಸಮಯವೆಂದೂ ಉಳಿದ ಸಮಯದಲ್ಲಿ ಅಲ್ಲಾಹನ ಇಬಾದತ್ ಮಾಡಬೇಕಾಗಿಲ್ಲವೆಂದೂ ಹೇಳಲಾರಿರಿ.

ಸಹೋದರರೇ,

ಈಗ ನಿಮಗೆ ಇಬಾದತ್‌ನ ಸರಿಯಾದ ಅರ್ಥ ತಿಳಿಯಿತಷ್ಟೆ. ಜೀವನದಲ್ಲಿ ಪ್ರತಿ ಕ್ಷಣದಲ್ಲೂ ಪ್ರತಿಯೊಂದು ಅವಸ್ಥೆಯಲ್ಲೂ ಅಲ್ಲಾಹನ ಆರಾಧನೆ, ದಾಸ್ಯ ಮತ್ತು ಅನುಸರಣೆ ಮಾಡುವುದರ ಹೆಸರೇ 'ಇಬಾದತ್' ಆಗಿದೆ. ಹಾಗಾದರೆ ನಮಾಝ್, ಉಪವಾಸ, ಹಜ್ಜ್ ಇತ್ಯಾದಿಗಳೆಲ್ಲ ಏನೆಂದು ನೀವು ಪ್ರಶ್ನಿಸುವಿರಿ. ನಿಮ್ಮ ಮೇಲೆ ಕಡ್ಡಾಯಗೊಳಿಸಲಾಗಿರುವ ಈ ಇಬಾದತ್‌ಗಳ ಉದ್ದೇಶವು ನಿಮ್ಮನ್ನು

ಅನವರತವೂ ಎಲ್ಲಾ ಸ್ಥಿತಿಗಳಲ್ಲಿಯೂ ನೆರವೇರಿಸಬೇಕಾದ ಮಹಾ ಇಬಾದತ್‌ಗಾಗಿ ಅಣಿಗೊಳಿಸುವು ದಾಗಿದೆ. ನೀವು ಅಲ್ಲಾಹನ ದಾಸರಾಗಿದ್ದು, ಅವನ ದಾಸ್ಯವನ್ನೇ ನೀವು ಸದಾ ಮಾಡುತ್ತಿರಬೇಕೆಂದು ನಮಾಝ್ ದಿನಂಪ್ರತಿ ಐದು ಬಾರಿ ನಿಮ್ಮನ್ನು ಜ್ಞಾಪಿಸುತ್ತದೆ. ಉಪವಾಸವು ವರ್ಷಕ್ಕೊಮ್ಮೆ ನಿರಂತರ ಒಂದು ತಿಂಗಳ ತನಕ ಇದೇ ಮಹಾ ಇಬಾದತ್‌ಗಾಗಿ ತರಬೇತಿ ನೀಡುತ್ತದೆ. ಝಕಾತ್ ನಿಮ್ಮಲ್ಲಿರುವ ಹಾಗೂ ನೀವು ಗಳಿಸಿದ ಸಂಪತ್ತು ಅಲ್ಲಾಹನ ಕೊಡುಗೆಯಾಗಿದ್ದು ಅದನ್ನು ನಿಮ್ಮ ವಿಷಯಾಸಕ್ತಿಗಳಿಗಾಗಿ ಮಾತ್ರ ವಿನಿಯೋಗಿಸದೆ ಅದರ ಯಥಾರ್ಥ ಒಡೆಯನ ಹಕ್ಕನ್ನು ಸಂದಾಯ ಮಾಡಬೇಕೆಂದು ಬಾರಿ ಬಾರಿಗೂ ನಿಮ್ಮ ಗಮನವನ್ನು ಸೆಳೆಯುತ್ತದೆ. ಹಜ್ಜ್ ನಿಮ್ಮ ಹೃದಯದಲ್ಲಿ ಅಲ್ಲಾಹನ ಅಚಲ ಪ್ರೇಮವು ನೆಲಸುವಂತೆ ಮಾಡುತ್ತದೆ. ಹೃದಯದಲ್ಲಿ ಪ್ರೇಮವು ನೆಲೆಯೂರಿ ಬಿಟ್ಟರೆ ಅದರ ಪ್ರಭಾವವು ಜೀವಮಾನವಿಡೀ ಸ್ಥಿರವಾಗಿ ಉಳಿಯುತ್ತದೆ. ಈ ಎಲ್ಲಾ ಇಬಾದತ್‌ಗಳನ್ನು ನೆರವೇರಿಸಿದ ಬಳಿಕ ನಿಮ್ಮ ಸಂಪೂರ್ಣ ಜೀವನವೇ 'ಇಬಾದತ್' ಆಗುವಂತಾದರೆ ಆಗ ನಿಮ್ಮ ನಮಾಝ್, ಉಪವಾಸ, ಝಕಾತ್ ಮತ್ತು ಹಜ್ಜ್‌ಗಳು ನಿಜಾರ್ಥದಲ್ಲಿ ಆರಾಧನೆಗಳಾಗಿ ಮಾರ್ಪಡುತ್ತದೆ. ಈ ಉದ್ದೇಶವು ನೆರವೇರದೆ ಹೋದರೆ ಬರೇ ರುಕೂಅ್ ಮತ್ತು ಸುಜೂದ್ ಮಾಡುವುದರಿಂದ, ಅನ್ನಪಾನೀಯಗಳನ್ನು ತೊರೆಯುವುದರಿಂದ, 'ಝಕಾತ್'ನ ಹಣ ಪಾವತಿಸುವುದರಿಂದ ಯಾವ ಪುರುಷಾರ್ಥವೂ ಆಗಲಾರದು. ಈ ಬಾಹ್ಯ ಆಚಾರಗಳನ್ನು ಒಂದು ಶರೀರಕ್ಕೆ ಹೋಲಿಸಬಹುದು. ಶರೀರದಲ್ಲಿ ಜೀವವಿದ್ದರೆ ಮತ್ತು ಅದು ಚಲಿಸುತ್ತಲೂ ಕೆಲಸ ಮಾಡುತ್ತಲೂ ಇದ್ದರೆ, ಅದು ಸಜೀವ ಮನುಷ್ಯನೆನಿಸುವುದು. ಅದರಲ್ಲಿ ಜೀವವಿಲ್ಲದೆ ಹೋದರೆ ಅದೊಂದು ಶವವೆನಿಸುವುದು. ಕೈ, ಕಾಲು, ಕಣ್ಣು, ಮೂಗು ಇತ್ಯಾದಿಗಳೆಲ್ಲಾ ಶವಕ್ಕೂ ಇರುತ್ತವೆ. ಆದರೆ ಅದರಲ್ಲಿ ಜೀವವಿಲ್ಲದಿರುವುದರಿಂದ ಅದನ್ನು ದಫನ ಮಾಡುತ್ತೀರಿ. ಅದೇ ರೀತಿ ನಮಾಝ್‌ನ ನಿಶ್ಚಿತ ವಿಧಿ-ಕರ್ಮಗಳು ಪೂರ್ಣವಾಗಿ ನೆರವೇರಿದಾಗಲೂ ಉಪವಾಸದ ಎಲ್ಲ ಶರ್ತಗಳನ್ನು ಪೂರೈಸಿದಾಗಲೂ ದೇಭಯ, ದೇವಪ್ರೇಮ, ಕೃತಜ್ಞತೆ, ಅನುಸರಣೆಗಳಿಲ್ಲದೆ ಹೋದಾಗ ಅದು ಒಂದು ನಿರ್ಜೀವ ವಸ್ತುವಾಗಿ ಬಿಡುವುದು.

ಮುಂದಿನ ಉಪನ್ಯಾಸದಲ್ಲಿ ಕಡ್ಡಾಯಗೊಳಿಸಲ್ಪಟ್ಟ ಇಬಾದತ್‌ಗಳು ಮನುಷ್ಯನನ್ನು ಅಲ್ಲಾಹನ ಆ ಮಹಾ ಇಬಾದತ್‌ಗೆ ಹೇಗೆ ಅಣಿಗೊಳಿಸುತ್ತವೆ ಮತ್ತು ಅವುಗಳನ್ನು ಬೋಧವರಿತು ನೆರವೇರಿಸುವುದರ ಮೂಲಕ ಅವುಗಳ ಉದ್ದೇಶ ಪ್ರಾಪ್ತಿಗಾಗಿ ಶ್ರಮಿಸಿದಾಗ ಅವು ನಿಮ್ಮ ಜೀವನದಲ್ಲಿ ಯಾವ ರೀತಿ ಪ್ರಭಾವ ಬೀರುತ್ತವೆಂಬುದನ್ನು ವಿವರವಾಗಿ ತಿಳಿಸುವೆನು.



# ನಮಾಝ್

ಹಿಂದಿನ ಉಪನ್ಯಾಸದಲ್ಲಿ ನಾನು ನಿಮ್ಮ ಮುಂದೆ ಜಿನ್ನ್ (ಯಕ್ಷ) ಮತ್ತು ಮಾನವರ ಸೃಷ್ಟಿಯ ಏಕಮಾತ್ರ ಉದ್ದೇಶವಾಗಿರುವ 'ಇಬಾದತ್'ನ ತಾತ್ಪರ್ಯವನ್ನು ವಿವರಿಸಿದ್ದೆ. ಇಸ್ಲಾಮಿನಲ್ಲಿ ಕಡ್ಡಾಯಗೊಳಿಸಲಾಗಿರುವ ಆರಾಧನಾ ಕರ್ಮಗಳು ಆ ಮಹತ್ತಾದ ಹಾಗೂ ಯಥಾರ್ಥವಾದ ಇಬಾದತ್‌ಗೆ ಯಾವ ರೀತಿಯಲ್ಲಿ ಮಾನವನನ್ನು ಅಣಿಗೊಳಿಸುತ್ತವೆ ಎಂಬುದನ್ನು ತೋರಿಸಿ ಕೊಡುವೆನೆಂಬ ವಾಗ್ದಾನವನ್ನೂ ಮಾಡಿದ್ದೆ. ಇವುಗಳ ಪೈಕಿ ಅತಿ ದೊಡ್ಡ ಹಾಗೂ ಪ್ರಮುಖ ಆರಾಧನಾ ಕರ್ಮ 'ನಮಾಝ್' ಆಗಿದೆ.

## ಇಬಾದತ್‌ನ ವಿಶಾಲಾರ್ಥ

'ಇಬಾದತ್' ಎಂದರೆ ದಾಸ್ಯ ಎಂದು ನಿಮಗೆ ತಿಳಿದೇ ಇದೆ. ನೀವು ಅಲ್ಲಾಹನ ದಾಸರಾಗಿಯೇ ಸೃಷ್ಟಿಸಲ್ಪಟ್ಟಿರುವಾಗ ಯಾವ ಹೊತ್ತಿನಲ್ಲೂ ಯಾವ ಅವಸ್ಥೆಯಲ್ಲಿಯೂ ಅವನ ದಾಸ್ಯತ್ವದಿಂದ ಹೊರಗಿರಲು ಸಾಧ್ಯವಿಲ್ಲ. ನಾನು ಇಂತಿಷ್ಟು ತಾಸುಗಳ ವರೆಗೆ ಅಲ್ಲಾಹನ ದಾಸನಾಗಿರುತ್ತೇನೆಂದೂ ಉಳಿದ ಅವಧಿಯಲ್ಲಿ ಅವನ ದಾಸನಲ್ಲವೆಂದೂ ನೀವು ಹೇಳಲಾರಿರಷ್ಟೆ. ಅದೇ ರೀತಿಯಲ್ಲಿ ನಾನು ಇಂತಿಷ್ಟು ಹೊತ್ತು ಅಲ್ಲಾಹನ ಇಬಾದತ್ ಮಾಡುವೆನೆಂದೂ ಉಳಿದ ವೇಳೆ ಸ್ವತಂತ್ರನಾಗಿದ್ದು ನನ್ನಿಚ್ಛೆಗೆ ಬಂದಂತೆ ಮಾಡುವೆನೆಂದೂ ನೀವು ಹೇಳಲಾರಿರಿ. ನೀವಂತೂ ಹುಟ್ಟಿನಿಂದಲೇ ಅವನ ದಾಸರು. ಅವನು ನಿಮ್ಮನ್ನು ಸೃಷ್ಟಿಸಿದುದು ತನ್ನ ದಾಸ್ಯಕ್ಕಾಗಿಯೇ ಆದ್ದರಿಂದ ನಿಮ್ಮ ಇಡೀ ಜೀವಮಾನವು ಅವನ ಇಬಾದತ್‌ನಲ್ಲೇ ಕಳೆಯಬೇಕು. ಒಂದು ಕ್ಷಣಕ್ಕಾದರೂ ಅವನ ಇಬಾದತ್‌ನಿಂದ ಅಲಕ್ಷ್ಯರಾಗಿರಲು ಸಾಧ್ಯವೇ ಇಲ್ಲ.

ಇಬಾದತ್ ಎಂದರೆ ಲೌಕಿಕ ವ್ಯವಹಾರಗಳಿಂದ ದೂರ ಸರಿದು ಒಂದು ಮೂಲೆಯಲ್ಲಿದ್ದುಕೊಂಡು ಅಲ್ಲಾಹನ ನಾಮ ಜಪಿಸುತ್ತಿರುವುದರ ಹೆಸರಲ್ಲ. ಬದಲಾಗಿ ನೀವು ಯಾವ ಕೆಲಸ ಮಾಡುವುದಿದ್ದರೂ ದೇವ ನಿರ್ಮಿತ ಕಾನೂನು

ಗಳಿಗನುಸಾರ ಮಾಡುತ್ತಿದ್ದರೆ ಅದು ಇಬಾದತ್ ಆಗಿರುವುದೆಂದು ನಾನು ನಿಮಗೆ ತಿಳಿಸಿರುತ್ತೇನೆ. ನಿಮ್ಮ ದೈನಂದಿನ ಚಟುವಟಿಕೆಗಳೆಲ್ಲವೂ ಅಲ್ಲಾಹನ ಕಾನೂನಿಗೆ ಅಧೀನವಾಗಿರಬೇಕು. ನೀವು ಮನೆಯಲ್ಲಿರುವಾಗ ನಿಮ್ಮ ಪತ್ನಿ–ಮಕ್ಕಳು, ಸಹೋದರ–ಸಹೋದರಿಯರು ಮತ್ತಿತರ ಸಂಬಂಧಿಕರೊಂದಿಗೆ ಅಲ್ಲಾಹನ ಆಜ್ಞೆಗಳಿಗನುಸಾರ ವ್ಯವಹರಿಸಬೇಕು. ನೀವು ನಿಮ್ಮ ಗೆಳೆಯರೊಂದಿಗೆ ನಕ್ಕು ನಲಿದಾಡುತ್ತಿರುವಾಗಲೂ ನಾವು ಅಲ್ಲಾಹನ ದಾಸ್ಯದಿಂದ ಹೊರತಾಗಿಲ್ಲವೆಂಬುದನ್ನು ನೆನಪಿಟ್ಟಿರಬೇಕು. ನೀವು ಸಂಪಾದನೆ ಮಾಡಹೊರಟಾಗಲೂ ಜನರೊಂದಿಗೆ ವ್ಯಾಪಾರ ವ್ಯವಹಾರ ಮಾಡುತ್ತಿರುವಾಗಲೂ ನಿಮ್ಮ ಮಾತು ಕೃತಿಗಳಲ್ಲಿ ಅಲ್ಲಾಹನ ವಿಧಿ ನಿಯಮಗಳನ್ನು ಪಾಲಿಸಬೇಕು. ಅಲ್ಲಾಹನು ನಿಶ್ಚಯಿಸಿದ ಮೇರೆಯನ್ನು ಎಂದೂ ಮೀರಬಾರದು. ನೀವು ರಾತ್ರೆಯ ಅಂಧಕಾರದಲ್ಲಿ ಯಾವುದಾದರೂ ಪಾಪ ಕೃತ್ಯವನ್ನು ಯಾರಿಗೂ ಕಾಣದಂತೆ ಮಾಡಬಲ್ಲಿರಾದರೂ ಅಲ್ಲಾಹನು ನಿಮ್ಮನ್ನು ಸದಾ ವೀಕ್ಷಿಸುತ್ತಿರುವನೆಂಬುದು ನಿಮಗೆ ನೆನಪಿರಬೇಕು. ಆಗ ನಿಮಗೆ ಅಲ್ಲಾಹನ ಭಯದ ಹೊರತು ಬೇರೆ ಯಾರದೇ ಭಯವಿರಬಾರದು. ನೀವು ಏಕಾಂಗಿಯಾಗಿ ಯಾವುದಾದರೊಂದು ನಿರ್ಜನ ಪ್ರದೇಶದಲ್ಲಿ ಸಾಗುತ್ತಿರುವಾಗ ಪೊಲೀಸರಾಗಲಿ, ಇನ್ನಿತರ ವೀಕ್ಷಕರಾಗಲಿ ಇಲ್ಲದ ಸ್ಥಿತಿಯಲ್ಲಿ ಯಾವುದೇ ಅಪರಾಧ ಮಾಡಬಹುದಾದ ಸಂದರ್ಭ ಪ್ರಾಪ್ತವಾದರೂ ಅಲ್ಲಾಹನ ಭಯದಿಂದಾಗಿ ನೀವು ಆ ದುಷ್ಕೃತ್ಯದಿಂದ ಹಿಂಜರಿಯಬೇಕು. ಸುಳ್ಳು, ವಂಚನೆ, ಅಕ್ರಮಗಳ ಮೂಲಕ ಹೇರಳ ಲಾಭ ಗಳಿಸಬಹುದಾದ ಸಂದರ್ಭ ಒದಗಿ ಬಂದು ಅದರಿಂದ ಯಾರೂ ನಿಮ್ಮನ್ನು ತಡೆಯುವವರಿಲ್ಲವೆಂದು ತಿಳಿದಿರುವಾಗಲೂ ಅಲ್ಲಾಹನು ಮೆಚ್ಚಲಾರನೆಂದು ಹೆದರಿ ಆ ಲಾಭವನ್ನು ಬಿಟ್ಟು ಬಿಡಬೇಕು. ಸತ್ಯ–ಪ್ರಾಮಾಣಿಕತೆಗಳಂತೆ ನಡೆದಾಗ ನಿಮಗೆ ಭಾರೀ ಕಷ್ಟನಷ್ಟಗಳುಂಟಾದಾಗಲೂ ಅಲ್ಲಾಹನ ಮೆಚ್ಚುಗೆ ಪ್ರಾಪ್ತವಾಗುವುದೆಂಬ ಏಕ ಮಾತ್ರ ಭರವಸೆಯಿಂದ ಅವುಗಳನ್ನು ಸಹಿಸಲು ಸಿದ್ಧರಾಗಬೇಕು.

ಇದುವೇ ಇಬಾದತ್. ಲೋಕ ವ್ಯವಹಾರಗಳನ್ನು ಬಿಟ್ಟು ಎಲ್ಲಾದರೊಂದು ಮೂಲೆಯಲ್ಲಿ ಕುಳಿತು ಜಪಮಣಿಗಳನ್ನು ತಿರುವುತ್ತಿರುವುದು ಇಬಾದತ್ ಅಲ್ಲ. ಬದಲಾಗಿ ಲೌಕಿಕ ವ್ಯವಹಾರಗಳಲ್ಲಿ ತಲ್ಲೀನರಾಗಿದ್ದುಕೊಂಡು ಆತನ ಆಜ್ಞೆಗಳನ್ನು ಪಾಲಿಸುವುದೇ ಇಬಾದತ್ ಆಗಿದೆ. ನಾಲಗೆಯಿಂದ ಅಲ್ಲಾಹ್ ಅಲ್ಲಾಹ್ ಎಂದು ಜಪಿಸುವುದನ್ನು ಅಲ್ಲಾಹನ 'ದಿಕ್ರ್' (ಜಪ ಅಥವಾ ಸ್ಮರಣೆ) ಎಂದು ಹೇಳಲಾಗುವುದಿಲ್ಲ. ಬದಲಾಗಿ ಲೌಕಿಕ ಜಂಜಾಟಗಳಲ್ಲಿ ಸಿಲುಕಿಕೊಂಡು ಆ ಗೊಂದಲಗಳ ನಡುವೆಯೂ ಅಲ್ಲಾಹನನ್ನು ಸ್ಮರಿಸುವುದು ಆತನ ದಿಕ್ರ್ ಆಗಿದೆ. ಅಲ್ಲಾಹನನ್ನು ಮರೆತು ಬಿಡಬಹುದಾದಂತಹ ಕಾರ್ಯಕಲಾಪಗಳಲ್ಲಿ ನಿರತರಾಗಿದ್ದೂ ಆತನನ್ನು

ಮರೆಯದಿರುವುದು, ಐಹಿಕ ಜೀವನದಲ್ಲಿ ಅಲ್ಲಾಹನ ಕಾನೂನುಗಳನ್ನು ಮುರಿಯುವ ಅನೇಕಾನೇಕ ಸಂದರ್ಭಗಳು ದೊಡ್ಡ ದೊಡ್ಡ ಲಾಭಗಳ ಲಾಲಸೆಯನ್ನು ಅಥವಾ ನಷ್ಟಗಳ ಭೀತಿಯನ್ನು ತೋರಿಸುತ್ತಾ ಎದುರಾದಾಗಲೂ ಅಲ್ಲಾಹನನ್ನು ಸ್ಮರಿಸಿ ಅವನ ಕಾನೂನುಗಳನ್ನು ಪಾಲಿಸುವುದು. ಇದನ್ನೇ ನಿಜವಾದ ದೇವಧ್ಯಾನ ಮತ್ತು ಇದನ್ನೇ ಆರಾಧ್ಯನ ದಿಕ್ರ್ (ಸ್ಮರಣೆ) ಎನ್ನುವುದು. ಕುರ್‌ಆನಿನಲ್ಲಿ "ನಮಾಝ್ ಮಾಡಿಯಾದ ಬಳಿಕ ಭೂಮಿಯಲ್ಲಿ ಹಬ್ಬಿರಿ ಮತ್ತು ಅಲ್ಲಾಹನ ಅನುಗ್ರಹ (ಅರ್ಥಾತ್ ಅನುವದನೀಯವಾದ ಜೀವನಾಧಾರ)ಗಳನ್ನು ಅರಸಲು ಶ್ರಮಿಸಿರಿ. (ಈ ಪರಿಶ್ರಮದ ವೇಳೆ) ಅಲ್ಲಾಹನನ್ನು ಅತ್ಯಧಿಕವಾಗಿ ಸ್ಮರಿಸಿರಿ. ಇದರಿಂದಲೇ ನಿಮಗೆ ವಿಜಯ ಪ್ರಾಪ್ತವಾಗುವುದು" (ಪವಿತ್ರ ಕುರ್‌ಆನ್: 62: 10) ಎಂದು ಸೂಚನೆ ನೀಡಿರುವುದು ಇಂತಹ ದಿಕ್ರ್‌ನ ಕಡೆಗೇ ಆಗಿದೆ.

## ನಮಾಝ್‌ನ ಪ್ರಯೋಜನಗಳು

'ಇಬಾದತ್'ನ ಈ ಅರ್ಥವನ್ನು ಮನಸ್ಸಿನಲ್ಲಿರಿಸಿಕೊಂಡ ಬಳಿಕ ಇಷ್ಟು ದೊಡ್ಡ ಇಬಾದತನ್ನು ನೆರವೇರಿಸಲು ಏನೆಲ್ಲ ಬೇಕು ಮತ್ತು ನಮಾಝ್ ಅವುಗಳನ್ನೆಲ್ಲಾ ಮಾನವನಲ್ಲಿ ಹೇಗೆ ಉಂಟು ಮಾಡುತ್ತದೆ ಎಂಬುದನ್ನು ನೋಡಿರಿ:

## ದಾಸ್ಯ ಪ್ರಜ್ಞೆ

ಮೊಟ್ಟಮೊದಲು ನೀವು ಅಲ್ಲಾಹನ ದಾಸರಾಗಿದ್ದು ಎಲ್ಲ ಕಾರ್ಯಗಳಲ್ಲೂ ಸದಾ ಅವನ ದಾಸ್ಯವನ್ನೇ ಮಾಡಬೇಕಾಗಿದೆ ಎಂಬುದನ್ನು ಪದೇ ಪದೇ ನಿಮ್ಮ ನೆನಪಿಗೆ ತರುವ ಅಗತ್ಯವಿದೆ. ಏಕೆಂದರೆ, ನಿಮ್ಮಲ್ಲಿ ಓರ್ವ ಶೈತಾನನು ನೆಲೆಸಿದ್ದಾನೆ. ಅವನು ನಿಮ್ಮೊಡನೆ 'ನೀನು ನನ್ನ ದಾಸನಾಗಿರುತ್ತಿ' ಎಂದು ಯಾವಾಗಲೂ ಹೇಳುತ್ತಲಿರುತ್ತಾನೆ. ಇತರ ಕೋಟ್ಯಾವಧಿ ಶೈತಾನರು ಜಗತ್ತಿನಾದ್ಯಂತ ಹಬ್ಬಿಕೊಂಡಿದ್ದು, ಅವುಗಳ ಪೈಕಿ ಪ್ರತಿಯೊಬ್ಬನೂ 'ನೀನು ನನ್ನ ದಾಸ' ಎಂದು ನಿಮ್ಮೊಡನೆ ಹೇಳುತ್ತಿರುತ್ತಾನೆ. ನೀನು ಯಾರ ದಾಸನೂ ಅಲ್ಲ; ನೀನು ಕೇವಲ ಅಲ್ಲಾಹನ ದಾಸನಾಗಿರುತ್ತಿ ಎಂದು ಮಾನವನಿಗೆ ದಿನಂಪ್ರತಿ ಅನೇಕ ಬಾರಿ ನೆನಪಿಸದೆ ಹೋದರೆ ಆ ಅಸಂಖ್ಯಾತ ಶೈತಾನರ ಮಾಯಾಜಾಲದಿಂದ ಪಾರಾಗುವುದು ಅಸಾಧ್ಯ. ಈ ಕಾರ್ಯವನ್ನೇ ನಮಾಝ್ ಮಾಡುತ್ತದೆ. ಮುಂಜಾನೆ ಎದ್ದ ಕೂಡಲೇ ಎಲ್ಲಾ ಕೆಲಸ ಕಾರ್ಯಗಳಿಗಿಂತ ಮೊದಲು ಅದು ಇದನ್ನೇ ನಿಮ್ಮ ನೆನಪಿಗೆ ತರುತ್ತದೆ. ಅನಂತರ ಹಗಲಲ್ಲಿ ನೀವು ನಿಮ್ಮ ಕಾರ್ಯ ಕಲಾಪಗಳಲ್ಲಿ ನಿರತರಾಗುತ್ತೀರಿ. ಆಗ ಪುನಃ ಮೂರು ಬಾರಿ ನಮಾಝ್ ಈ ಸ್ಮರಣೆಯನ್ನು ಜಾಗೃತಗೊಳಿಸುತ್ತದೆ. ರಾತ್ರೆ ಮಲಗುವುದಕ್ಕೆ ಮುಂಚೆ ಕೊನೆಯ ಬಾರಿ ಅದನ್ನೇ ಪುನರಾವರ್ತಿಸಲಾಗುತ್ತದೆ.

ಇದು ನಮಾಝ್‌ನಿಂದ ಸಿಗುವ ಒಂದನೆಯ ಲಾಭ. ಈ ಕಾರಣದಿಂದಾಗಿಯೇ ಕುರ್‌ಆನ್‌ನಲ್ಲಿ ನಮಾಝನ್ನು 'ದಿಕ್ರ್' ಎಂದು ಕರೆಯಲಾಗಿದೆ. ಇದು ಅಲ್ಲಾಹನ ಸ್ಮರಣೆ ಎಂದರ್ಥ.

## ಕರ್ತವ್ಯ ಪಾಲನೆ

ಜೀವನದ ಪ್ರತಿಯೊಂದು ಹೆಜ್ಜೆಯಲ್ಲೂ ನಿಮಗೆ ಅಲ್ಲಾಹನ ಆಜ್ಞಾಪಾಲನೆ ಮಾಡಬೇಕಾಗಿದೆ. ಇದಕ್ಕಾಗಿ ನಿಮ್ಮಲ್ಲಿ ಕರ್ತವ್ಯ ಪ್ರಜ್ಞೆಯ ಗುಣ ಬೆಳೆಯಬೇಕಾಗಿದೆ. ನಿಷ್ಠೆಯಿಂದ ಕರ್ತವ್ಯಪಾಲನೆ ಮಾಡುವ ಅಭ್ಯಾಸವೂ ಆಗಬೇಕಾಗಿದೆ. 'ಕರ್ತವ್ಯ' ವೆಂದರೇನೆಂದೇ ಅರಿಯದಾತನು ಆಜ್ಞಾಪಾಲನೆಯನ್ನೆಂದೂ ಮಾಡಲಾರ. ಕರ್ತವ್ಯ ಪ್ರಜ್ಞೆ ಆದರೂ ಅವನ ತರಬೇತಿಯು ಅದನ್ನು ನೆರವೇರಿಸಲು ಸಿದ್ಧನಾಗುವ ರೀತಿ ಯಲ್ಲಿ ಅಪಕ್ವ ಹಾಗೂ ದೋಷಯುಕ್ತ ರೀತಿಯಲ್ಲಿ ಆಗಿದ್ದರೆ ದಿನದ 24 ತಾಸು ಗಳುದ್ದಕ್ಕೂ ಅವನಿಗೆ ಒಪ್ಪಿಸಲಾಗುವ ಸಾವಿರಾರು ಕರ್ತವ್ಯಗಳನ್ನು ನಿಷ್ಠೆಯಿಂದ ನೆರವೇರಿಸುವನೆಂದು ನಿರೀಕ್ಷಿಸಲಿಕ್ಕೂ ಆಗದು.

## ಅನುಸರಣೆಯ ತರಬೇತಿ

ಸೈನ್ಯ ಹಾಗೂ ಆರಕ್ಷಕ (ಪೊಲೀಸ್) ದಳಗಳಲ್ಲಿ ದುಡಿದವರಿಗೆ ಆ ನೌಕರಿ ಗಳಲ್ಲಿ ಕರ್ತವ್ಯ ಪ್ರಜ್ಞೆ ಹಾಗೂ ಕರ್ತವ್ಯ ನಿರ್ವಹಣೆಯ ತರಬೇತಿಯನ್ನು ಕೊಡುವ ರೀತಿ ಹೇಗೆಂಬುದು ತಿಳಿದಿರುತ್ತದೆ. ರಾತ್ರಿ ಹಗಲುಗಳಲ್ಲಿ ಅನೇಕಾನೇಕ ಬಾರಿ ಕಹಳೆ ಊದಿ ಸಿಪಾಯಿಗಳಿಗೆ ಹಾಜರಿ ಕೊಡಲು ಅಪ್ಪಣೆ ಕೊಡಲಾಗುತ್ತದೆ. ಅವರಿಂದ ಕವಾಯಿತು ಮಾಡಿಸಲಾಗುತ್ತದೆ. ಇದನ್ನು ಆಜ್ಞಾಪಾಲನೆಯ ಅಭ್ಯಾಸ ಮಾಡುವ ಉದ್ದೇಶದಿಂದ ಮಾಡಲಾಗುತ್ತದೆ. ಒಬ್ಬನು ಕಹಳೆಯ ಧ್ವನಿ ಕೇಳಿಯೂ ಮನೆಯೊಳಗೇ ಕುಳಿತಿದ್ದರೆ ಅಥವಾ ಕವಾಯಿತಿನ ಅಣತಿಯಂತೆ ಚಲಿಸದಿರುವಷ್ಟು ಸೋಮಾರಿ ಯಾಗಿದ್ದರೆ ಅಂತಹವನನ್ನು ನಿಷ್ಪ್ರಯೋಜಕನೆಂದು ತಿಳಿದು ನೌಕರಿಯಿಂದ ಉಚ್ಚಾಟಿಸ ಲಾಗುತ್ತದೆ. ಅದೇ ರೀತಿ ನಮಾಝ್ ಕೂಡಾ ದಿನಕ್ಕೆ ಐದಾವರ್ತಿ ಕಹಳೆ ಬಾರಿಸುವ ಮೂಲಕ ಅದನ್ನು ಕೇಳಿದ ಅಲ್ಲಾಹನ ಸೈನಿಕರು ಎಲ್ಲಾ ದಿಕ್ಕುಗಳಿಂದಲೂ ಧಾವಿಸಿ ಬರುವಂತೆಯೂ ತಾವು ಅಲ್ಲಾಹನ ಆಜ್ಞಾಪಾಲನೆ ಮಾಡಲು ಸದಾ ಸಿದ್ಧವೆಂದು ಸಾಬೀತು ಪಡಿಸುವಂತೆಯೂ ಮಾಡುತ್ತದೆ. ಈ ನಾದವನ್ನು ಕೇಳಿಯೂ ತನ್ನ ಸ್ಥಾನವನ್ನು ಬಿಟ್ಟು ಕದಲದ ಮುಸ್ಲಿಮನು ತನ್ನ ಕರ್ತವ್ಯವನ್ನೇ ಅರಿತಿರುವುದಿಲ್ಲ ಅಥವಾ ಅರಿತಿದ್ದರೂ ಅಲ್ಲಾಹನ ಸೈನ್ಯದಲ್ಲಿರಲು ಅಯೋಗ್ಯನಾಗಿರುವಷ್ಟು ನೀಚನಾಗಿರುತ್ತಾನೆ.

ಇದೇ ಕಾರಣಕ್ಕಾಗಿ ಪ್ರವಾದಿವರ್ಯರು(ಸ) "ಅದಾನ್ (ನಮಾಝ್‌ನ ಕರೆ)

ಕೇಳಿಯೂ ಮನೆಗಳಿಂದ ಹೊರಡದವರ ಮನೆಗಳನ್ನು ಸುಟ್ಟು ಬಿಡಬೇಕೆಂದು ನನಗನಿಸುತ್ತದೆ" ಎಂದು ಹೇಳಿದ್ದರು. ಆದ್ದರಿಂದಲೇ ಹದೀಸ್‌ನಲ್ಲಿ ನಮಾಝನ್ನು, ಕುಫ್ರ್ ಮತ್ತು ಇಸ್ಲಾಮನ್ನು ಅಳೆಯುವ ಮಾನದಂಡವೆನ್ನಲಾಗಿದೆ. ಪ್ರವಾದಿವರ್ಯರ(ಸ) ಹಾಗೂ ಸಹಾಬಿಗಳ ಕಾಲದಲ್ಲಿ ಸಾಮೂಹಿಕ ನಮಾಝ್‌ಗಾಗಿ ಹಾಜರಾಗದವರನ್ನು ಮುಸ್ಲಿಮನೆಂದೇ ಪರಿಗಣಿಸುತ್ತಿರಲಿಲ್ಲ. ತಮ್ಮನ್ನು ಇತರರು ಮುಸ್ಲಿಮರೆಂದೇ ತಿಳಿದು ಕೊಳ್ಳಬೇಕೆಂದು ಬಯಸುತ್ತಿದ್ದ ಮುನಾಫಿಕರು (ಕಪಟವಿಶ್ವಾಸಿಗಳು) ಕೂಡ ಸಾಮೂಹಿಕ ನಮಾಝ್‌ನಲ್ಲಿ ಬಂದು ಸೇರಲು ನಿರ್ಬಂಧಿತರಾಗಿದ್ದರು. ಆದುದ ರಿಂದಲೇ ಕುರ್‌ಆನಿನಲ್ಲಿ "ಮುನಾಫಿಕರು ನಮಾಝ್ ಮಾಡುವುದಿಲ್ಲ" ಎನ್ನದೆ, "ಅವರು ನಿರ್ವಾಹವಿಲ್ಲದೆ ಅರೆಮನಸ್ಸಿನಿಂದ ನಮಾಝ್‌ಗಾಗಿ ಎದ್ದು ಬರುತ್ತಾರೆ" ಎಂದು ಹೇಳಲಾಗಿದೆ. (ಪವಿತ್ರ ಕುರ್‌ಆನ್: 51: 56)

ನಮಾಝ್ ಮಾಡದವರನ್ನು ಮುಸ್ಲಿಮನೆಂದು ತಿಳಿಯಲು ಇಸ್ಲಾಮಿನಲ್ಲಿ ಅವಕಾಶವೇ ಇಲ್ಲವೆಂದು ಇದರಿಂದ ತಿಳಿದು ಬರುತ್ತಿದೆ. ಏಕೆಂದರೆ ಇಸ್ಲಾಮ್ ಕೇವಲ ವಿಶ್ವಾಸಕ್ಕೆ ಸಂಬಂಧಿಸಿದ ವಿಷಯವಲ್ಲ; ಆಚಾರಕ್ಕೂ ಸಂಬಂಧಿಸಿದ ವಿಷಯ ವಾಗಿದೆ. ನಮಾಝ್ ಜೀವನದ ಪ್ರತಿ ಕ್ಷಣದಲ್ಲೂ ಓರ್ವ ಮುಸ್ಲಿಮನಿಗೆ ಇಸ್ಲಾಮಿನ ನಿಯಮಗಳನ್ನು ಅನುಸರಿಸಲಿಕ್ಕೂ ಕುಫ್ರ್ (ಅಧರ್ಮ) ಮತ್ತು ಫಿಸ್ಕ್‌ನ (ಕರ್ಮ ಭ್ರಷ್ಟತೆ) ವಿರುದ್ಧ ಹೋರಾಟ ನಡೆಸಲಿಕ್ಕೂ ಸಹಕರಿಸುವ ಕ್ರಿಯೆಯಾಗಿದೆ. ಇಂತಹ ಕ್ರಿಯಾತ್ಮಕ ಜೀವನ ಮಾಡಬೇಕಾದರೆ ಮುಸ್ಲಿಮನು ಅಲ್ಲಾಹನ ಆಜ್ಞಾ ಪಾಲನೆ ಮಾಡಲು ಅನವರತವೂ ಸಜ್ಜಾಗಿರಬೇಕಾಗುತ್ತದೆ. ಇಂತಹ ಆಸಕ್ತಿ ಇಲ್ಲ ದಾತನು ಇಸ್ಲಾಮಿಗೆ ನಿಷ್ಪ್ರಯೋಜಕ. ಆದುದರಿಂದಲೇ ನಮಾಝನ್ನು ದಿನಕ್ಕೆ ಐದು ಬಾರಿ ಕಡ್ಡಾಯಗೊಳಿಸುವ ಮೂಲಕ ಮುಸ್ಲಿಮರೆನಿಸುವವರು ನಿಜವಾದ ಮುಸ್ಲಿಮರಾಗಿರು ತ್ತಾರೋ ನಿಜಕ್ಕೂ ಈ ಕರ್ಮ ಜೀವನದಲ್ಲಿ ಅಲ್ಲಾಹನ ಆಜ್ಞಾನು ಸರಣೆಗೆ ಅಣಿಯಾಗಿರುವರೋ ಎಂದು ಪರೀಕ್ಷಿಸಲಾಗುತ್ತದೆ. ಅವರು ದೈವಿಕ ಕವಾಯಿತಿಗಾಗಿ ನೀಡಲಾದ ಆಹ್ವಾನವನ್ನು ಕೇಳಿ ಕದಲದಿದ್ದರೆ ಅವರು ಇಸ್ಲಾಮಿನ ಕ್ರಿಯಾತ್ಮಕ ಜೀವನಕ್ಕೆ ಸಿದ್ಧರಿಲ್ಲವೆಂಬುದು ಖಾತ್ರಿಯಾಗಿ ತಿಳಿಯುತ್ತದೆ. ಆ ಬಳಿಕ ಅಲ್ಲಾಹನನ್ನೂ ಪ್ರವಾದಿಯನ್ನೂ ನಂಬುವುದು ಕೇವಲ ಅರ್ಥಹೀನವಾಗುತ್ತದೆ. ಆದುದರಿಂದಲೇ "ಅಲ್ಲಾಹನ ದಾಸ್ಯ ಹಾಗೂ ಅನುಸರಣೆಗೆ ಸಿದ್ಧರಿಲ್ಲದವರಿಗೆ ಮಾತ್ರ ನಮಾಝ್ ಒಂದು ತ್ರಾಸದಾಯಕ ಕಾರ್ಯ" (ಪವಿತ್ರ ಕುರ್‌ಆನ್: 2: 45) ಎಂದು ಕುರ್‌ಆನಿನಲ್ಲಿ ಹೇಳಲಾಗಿದೆ. ನಮಾಝನ್ನು ತ್ರಾಸದಾಯಕವೆಂದು ಭಾವಿ ಸುವವನು ತಾನು ಅಲ್ಲಾಹನ ಆಜ್ಞಾಪಾಲನೆಗೆ ಸಿದ್ಧನಿಲ್ಲವೆಂಬುದನ್ನು ಸಾಬೀತು ಪಡಿಸುತ್ತಾನೆ.

## ದೇವಭಯ ಉಂಟು ಮಾಡುವುದು

ಮೂರನೆಯದಾಗಿ ಹೃದಯದಲ್ಲಿ ದೇವಭಯ ಸದಾ ಜಾಗೃತವಾಗಿ ಉಳಿದಿರಬೇಕು. ಅಲ್ಲಾಹನು ತನ್ನನ್ನು ಎಲ್ಲಿದ್ದರೂ ಸದಾ ವೀಕ್ಷಿಸುತ್ತಿರುವನು ಮತ್ತು ತನ್ನ ಪ್ರತಿಯೊಂದು ಕೃತ್ಯದ ಅರಿವೂ ಆತನಿಗಿದೆಯೆಂಬ ದೃಢ ವಿಶ್ವಾಸ ಒಬ್ಬ ಮುಸ್ಲಿಮನಲ್ಲಿ ಮೂಡುವ ವರೆಗೆ ಆತನಿಗೆ ಇಸ್ಲಾಮಿನಂತೆ ನಡೆಯಲು ಸಾಧ್ಯವೇ ಇಲ್ಲ. ಗಾಢಾಂಧಕಾರದಲ್ಲೂ ಆತನು ನೋಡುತ್ತಿರುವನು ಮತ್ತು ಏಕಾಂತದಲ್ಲೂ ತನ್ನ ಜೊತೆಗಿರುವನೆಂಬ ಹಾಗೂ ಜಗತ್ತಿನಿಂದ ಅಡಗಿರಲು ಸಾಧ್ಯವಾದರೂ ಅಲ್ಲಾಹನಿಂದ ಅಡಗಿರಲು ಸಾಧ್ಯವಿಲ್ಲ ಮತ್ತು ಜಗತ್ತಿನ ಶಿಕ್ಷೆಗಳಿಂದ ಹೇಗಾದರೂ ತಪ್ಪಿಸಿಕೊಳ್ಳಬಹುದಾದರೂ ಅಲ್ಲಾಹನ ಶಿಕ್ಷೆಯಿಂದ ಯಾವ ರೀತಿಯಿಂದಲೂ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲವೆಂಬ ಈ ಅಚಲ ವಿಶ್ವಾಸವೇ ದೇವಾಜ್ಞೆಯ ಉಲ್ಲಂಘನೆಯಿಂದ ಮಾನವನನ್ನು ತಡೆಯುತ್ತದೆ. ಈ ದೃಢ ವಿಶ್ವಾಸದ ಬಲದಿಂದಲೇ ಮಾನವನು ತನ್ನ ಜೀವನದ ವ್ಯವಹಾರಗಳಲ್ಲಿ ಅಲ್ಲಾಹನು ನಿಶ್ಚಯಿಸಿರುವ ಹಲಾಲ್-ಹರಾಮ್ (ವಿಧಿ-ನಿಷೇಧ)ಗಳ ಮೇರೆಗಳನ್ನು ಪಾಲಿಸಲು ನಿರ್ಬಂಧಿತನಾಗುತ್ತಾನೆ. ಈ ವಿಶ್ವಾಸ ದುರ್ಬಲವಾದರೆ ಮುಸ್ಲಿಮನು ನಿಜಾರ್ಥದಲ್ಲಿ ಮುಸ್ಲಿಮನಂತೆ ಎಂದಿಗೂ ಜೀವನ ನಡೆಸುವಂತಿಲ್ಲ. ಈ ವಿಶ್ವಾಸವನ್ನು ಹೃದಯದಲ್ಲಿ ಆಗಾಗ ದೃಢಗೊಳಿಸುತ್ತಿರಲೆಂದೇ ಅಲ್ಲಾಹನು ನಮಾಝನ್ನು ದಿನಕ್ಕೆ ಐದು ಬಾರಿ ಕಡ್ಡಾಯಗೊಳಿಸಿರುತ್ತಾನೆ. "ನಮಾಝ್ ಮಾನವನನ್ನು ಪಾಪ ಮತ್ತು ನಿರ್ಲಜ್ಜೆಯಿಂದ ತಡೆಯುತ್ತದೆ" (ಪವಿತ್ರ ಕುರ್‌ಆನ್: 29: 45) ಎಂಬ ಕುರ್‌ಆನ್ ವಾಕ್ಯದಿಂದ ಇದನ್ನು ಕಡ್ಡಾಯಗೊಳಿಸಿರುವ ಉದ್ದೇಶವನ್ನು ಊಹಿಸಬಲ್ಲಿರಿ.

ಉದಾ: ನೀವು ನಿರ್ಮಲವಾಗಿ ವುಝೂ ಮಾಡಿ ನಮಾಝ್‌ಗೆ ಬರುತ್ತೀರಿ. ನೀವು ಕೊಳಕಾಗಿದ್ದರೆ, ಸ್ನಾನ ಮಾಡದೆ ಬಂದರೆ ಅಥವಾ ಹೊಲಸು ಬಟ್ಟೆಗಳನ್ನು ಧರಿಸಿಕೊಂಡು ಬಂದರೆ ಅಥವಾ ವುಝೂ ಇಲ್ಲದಿದ್ದಾಗಲೂ ನೀವು ವುಝೂ ಮಾಡಿ ಬಂದೆನೆಂದು ಹೇಳಿದರೆ ಈ ಲೋಕದಲ್ಲಿ ನಿಮ್ಮನ್ನು ತಡೆಯುವವರಾರು? ಆದರೆ ನೀವು ಹಾಗೆ ಮಾಡುವುದಿಲ್ಲ. ಏಕೆಂದರೆ ಈ ಪಾಪ ಕಾರ್ಯಗಳನ್ನು ಅಲ್ಲಾಹನ ಅರಿವಿಗೆ ಬಾರದಂತೆ ಮಾಡಲಾಗದೆಂಬ ದೃಢ ವಿಶ್ವಾಸ ನಿಮಗಿದೆ. ಅಂತೆಯೇ ನಮಾಝ್‌ನಲ್ಲಿ ಮೆಲುದನಿಯಲ್ಲಿ ಪಠಿಸಬೇಕಾದುದನ್ನು ನೀವು ಪಠಿಸದೇ ಇದ್ದರೆ ಯಾರಿಗೂ ತಿಳಿಯಲಾರದು. ಆದರೆ ನೀವು ಹಾಗೆ ಮಾಡುವುದಿಲ್ಲ. ಏಕೆಂದರೆ ಅಲ್ಲಾಹನು ಸರ್ವವನ್ನೂ ಆಲಿಸುತ್ತಿದ್ದಾನೆ ಹಾಗೂ ಅವನು ನಿಮ್ಮ ಜೀವನಾಡಿಗಿಂತಲೂ ನಿಕಟನಾಗಿದ್ದಾನೆಂಬ ವಿಶ್ವಾಸ ನಿಮಗಿದೆ.

ಅಂತೆಯೇ ನೀವು ಕಾಡಿನಲ್ಲೂ ನಮಾಝ್ ಮಾಡುತ್ತೀರಿ. ರಾತ್ರಿಯ ಅಂಧಕಾರದಲ್ಲೂ ನಮಾಝ್ ಮಾಡುತ್ತೀರಿ. ಮನೆಯಲ್ಲಿ ಒಬ್ಬಂಟಿಗರಾಗಿದ್ದಾಗ, ನಮಾಝ್ ಮಾಡದಿದ್ದರೆ ಅದನ್ನು ಯಾರೂ ತಿಳಿಯಲಾರರು ಎಂದು ತಿಳಿದಿರುವಾಗಲೂ ನೀವು ನಮಾಝ್ ಮಾಡುತ್ತೀರಿ. ಇದೇಕೆ? ಏಕೆಂದರೆ ನೀವು ಮರೆಯಲ್ಲೂ ಅಲ್ಲಾಹನ ಆಜ್ಞೋಲ್ಲಂಘನೆ ಮಾಡಲು ಭಯಪಡುತ್ತೀರಿ. ಅಲ್ಲಾಹನಿಂದ ಯಾವ ಅಪರಾಧವನ್ನೂ ಅಡಗಿಸಿಡಲು ಸಾಧ್ಯವಿಲ್ಲವೆಂಬ ಅಚಲ ವಿಶ್ವಾಸ ನಿಮಗಿದೆ. ಈ ಎಲ್ಲಾ ವಿವರಣೆಗಳಿಂದ, ನಮಾಝ್ ಯಾವ ರೀತಿಯಲ್ಲಿ ಅಲ್ಲಾಹನ ಭಯವನ್ನೂ ಅವನು ಪ್ರತ್ಯಕ್ಷ ಪರೋಕ್ಷಗಳ ಜ್ಞಾನಿಯಾಗಿರುವನೆಂಬ ವಿಶ್ವಾಸವನ್ನೂ ಮಾನವನ ಹೃದಯದಲ್ಲಿ ಉಂಟುಮಾಡುತ್ತದೆ ಮತ್ತು ಅದನ್ನು ನವೀಕರಿಸುತ್ತಿರುತ್ತದೆ ಎಂಬುದನ್ನು ನೀವು ಊಹಿಸಬಲ್ಲಿರಿ. ಈ ಭಯ ವಿಶ್ವಾಸಗಳು ಪುನರ್ ನವೀಕರಣಗೊಳ್ಳುತ್ತಾ ಹೋಗದಿದ್ದರೆ ದಿನದ 24 ತಾಸುಗಳಲ್ಲೂ ನಿರಂತರವಾಗಿ ನೀವು ಅಲ್ಲಾಹನ ದಾಸ್ಯ ನಿರ್ವಹಿಸುವು ದಾದರೂ ಹೇಗೆ? ನಿಮ್ಮ ಹೃದಯವು ಇದರಿಂದ ವಿರಹಿತವಾಗಿ ಬಿಟ್ಟರೆ ಈ ಲೋಕದಲ್ಲಿ ರಾತ್ರಿ ಹಗಲೆನ್ನದೆ ನಡೆಯುತ್ತಿರುವ ಸಹಸ್ರಾರು ವ್ಯವಹಾರಗಳಲ್ಲಿ ಅಲ್ಲಾಹನನ್ನು ಭಯಪಟ್ಟು ಸತ್ಕಾರ್ಯಗಳಲ್ಲೇ ಸ್ಥಿರವಾಗಿರಲಿಕ್ಕೆ ಮತ್ತು ದುಷ್ಕರ್ಮಗಳಿಂದ ದೂರವಿರಲಿಕ್ಕೆ ಹೇಗೆ ಸಾಧ್ಯವಾದೀತು?

## ದೈವಿಕ ಕಾನೂನಿನ ತಿಳುವಳಿಕೆ

ಅಲ್ಲಾಹನ ದಾಸ್ಯ ನಿರ್ವಹಣೆಗೆ ಅಗತ್ಯವಾಗಿ ಬೇಕಾದ ನಾಲ್ಕನೆಯ ವಿಷಯವು– ನೀವು ಅವನ ಶಾಸನಗಳನ್ನು ಅರಿತಿರಬೇಕೆಂಬುದಾಗಿದೆ. ನಿಮಗೆ ಅಲ್ಲಾಹನ ಕಾನೂನುಗಳ ಅರಿವೇ ಇಲ್ಲದೆ ಹೋದರೆ ನೀವು ಅವುಗಳಂತೆ ನಡೆಯುವುದಾದರೂ ಹೇಗೆ? ಅಲ್ಲಾಹನ ಕಾನೂನುಗಳನ್ನು ತಿಳಿಸುವ ಕಾರ್ಯವನ್ನು ನಮಾಝ್ ನೆರವೇರಿಸುತ್ತದೆ. ದಿನಂಪ್ರತಿ ಅಲ್ಲಾಹನ ಆಜ್ಞೆಗಳ ಅರಿವುಂಟಾಗಲಿಕ್ಕಾಗಿಯೇ ನಮಾಝ್‌ನಲ್ಲಿ ಕುರ್‌ಆನ್ ಪಠಿಸಲಾಗುತ್ತದೆ. ಶುಕ್ರವಾರದ 'ಖುತ್‌ಬಾ'ಗಳು ನಿಮಗೆ ಇಸ್ಲಾಮಿನ ಪರಿಜ್ಞಾನ ಉಂಟು ಮಾಡುವುದಕ್ಕಾಗಿದೆ. ಸಾಮೂಹಿಕ ನಮಾಝ್ ಮತ್ತು ಜುಮಾ ನಮಾಝ್‌ಗಳ ಮೂಲಕ ವಿದ್ಯಾವಂತರಿಗೂ ಅವಿದ್ಯಾವಂತರಿಗೂ ಪದೇ ಪದೇ ಒಂದೆಡೆ ಕಲೆತು ಅಲ್ಲಾಹನ ಆದೇಶಗಳನ್ನು ಅರಿಯುವ ಸಂದರ್ಭ ಸಿಗುತ್ತದೆ. ಹೀಗಿದ್ದೂ ನೀವು ನಮಾಝ್‌ನಲ್ಲಿ ಪಠಿಸುತ್ತಿರುವುದೇನೆಂದು ತಿಳಿದುಕೊಳ್ಳಲು ಪ್ರಯತ್ನಿಸದಿರುವುದು ದೌರ್ಭಾಗ್ಯ. ನಿಮಗೆ ಕೇಳಿಸಲಾಗುವ 'ಜುಮಾ ಖುತ್‌ಬಾ'ಗಳಲ್ಲಿ ಇಸ್ಲಾಮಿನ ಯಾವ ಜ್ಞಾನವೂ ದೊರೆಯುವುದಿಲ್ಲ. ಸಾಮೂಹಿಕ ನಮಾಝ್‌ಗಳಿಗೆ ಹಾಜರಾಗಿ ನಿಮ್ಮ ವಿದ್ಯಾವಂತರು ಅವಿದ್ಯಾವಂತ

ಸಹೋದರರಿಗೆ ಏನನ್ನೂ ಕಲಿಸಿ ಕೊಡುವುದಿಲ್ಲ. ಅವಿದ್ಯಾವಂತರು ವಿದ್ಯಾವಂತರಿಂದ ಕೇಳಿ ತಿಳಿದುಕೊಳ್ಳುವುದಿಲ್ಲ. ನಮಾಝ್ ನಿಮಗೆ ಈ ಎಲ್ಲ ಪ್ರಯೋಜನಗಳನ್ನು ಗಳಿಸಿಕೊಳ್ಳುವ ಅವಕಾಶ ಒದಗಿಸಿಕೊಡುತ್ತದೆ. ನೀವೇ ಆ ಪ್ರಯೋಜನಗಳನ್ನು ಗಳಿಸದೆ ಹೋದರೆ ಅದರಲ್ಲಿ ನಮಾಝ್‌ನ ತಪ್ಪೇನು?

## ಸಂಘಟನಾತ್ಮಕ ತರಬೇತಿ

ಐದನೆಯದಾಗಿ ಪ್ರತಿಯೋರ್ವ ಮುಸ್ಲಿಮನು ಜೀವನದ ಈ ಹೋರಾಟದಲ್ಲಿ ಒಬ್ಬಂಟಿಗನಾಗಿರಬಾರದು. ಎಲ್ಲಾ ಮುಸ್ಲಿಮರೂ ಒಟ್ಟಾಗಿ ಒಂದು ಶಕ್ತಿಯುತ ಸಮುದಾಯವಾಗಿದ್ದುಕೊಂಡು ಅಲ್ಲಾಹನ ದಾಸ್ಯ ನಿರ್ವಹಣೆಗೆ ಅರ್ಥಾತ್ ಅವನ ಆಜ್ಞಾಪಾಲನೆ ಮಾಡಲು, ಅವನ ಕಾನೂನಿನಂತೆ ನಡೆಯಲು ಮತ್ತು ಅದನ್ನು ಜಗತ್ತಿನಲ್ಲಿ ಜಾರಿಗೊಳಿಸಲು ಪರಸ್ಪರ ಸಹಕರಿಸಬೇಕು. ಈ ಐಹಿಕ ಜೀವನದಲ್ಲಿ ಒಂದು ಕಡೆ ಮುಸ್ಲಿಮರು (ಅಲ್ಲಾಹನ ಆಜ್ಞಾಪಾಲಕ ದಾಸರು) ಇದ್ದಾರೆ. ಇನ್ನೊಂದು ಕಡೆ ಅಲ್ಲಾಹನ ಬಂಡುಗಾರ ದಾಸರಿದ್ದಾರೆ. ಇವರ ನಡುವೆ ರಾತ್ರಿ ಹಗಲೆನ್ನದೆ ಆಜ್ಞಾಪಾಲನೆ ಮತ್ತು ಆಜ್ಞೋಲ್ಲಂಘನೆಗಳ ಹೋರಾಟ ನಡೆಯುತ್ತಲಿರುವ ಸಂಗತಿ ನಿಮಗೆ ಗೊತ್ತೇ ಇದೆ. ಬಂಡುಗಾರರು ಅಲ್ಲಾಹನ ಆಜ್ಞೆಗಳನ್ನು ಮುರಿಯುತ್ತಿದ್ದಾರೆ ಮತ್ತು ಪೈಶಾಚಿಕ ಕಾನೂನುಗಳನ್ನು ಜಾರಿಗೊಳಿಸುತ್ತಾರೆ. ಇದರ ವಿರುದ್ಧ ಮುಸ್ಲಿಮರು ಒಬ್ಬೊಬ್ಬರಾಗಿ ಹೋರಾಡಿದರೆ ಜಯ ಗಳಿಸಲಾರರು. ಅದಕ್ಕಾಗಿ ಅಲ್ಲಾಹನ ಆಜ್ಞಾಪಾಲಕ ದಾಸರು ಒಂದು ಸಂಘಟಿತ ಶಕ್ತಿಯಾಗಿ ಬಂಡಾಯವನ್ನೆದುರಿಸಿ ಅಲ್ಲಾಹನ ಕಾನೂನುಗಳನ್ನು ಜಾರಿಗೊಳಿಸಬೇಕು. ಇಂತಹ ಶಕ್ತಿಯನ್ನು ಇತರೆಲ್ಲ ಸಾಧನಗಳಿಗಿಂತ ಹೆಚ್ಚಾಗಿ ನಮಾಝ್ ಉಂಟುಮಾಡುತ್ತದೆ. ಐದು ಹೊತ್ತಿನ ಜಮಾಅತ್, ಜುಮಾದ ದೊಡ್ಡ ಕೂಟಗಳು ಇವೆಲ್ಲಾ ಒಟ್ಟುಗೂಡಿ ಮುಸ್ಲಿಮರನ್ನು ಒಂದು ಭದ್ರ ಗೋಡೆಯಂತೆ ಮಾಡಿ ಅವರನ್ನು ದೈನಂದಿನ ಜೀವನದಲ್ಲಿ ಪರಸ್ಪರ ಸಹಾಯಕರನ್ನಾಗಿ ಮಾಡಲು ಅಗತ್ಯವಾದ ಭಾವನಾತ್ಮಕ ಮತ್ತು ಕ್ರಿಯಾತ್ಮಕ ಐಕ್ಯವನ್ನುಂಟು ಮಾಡುತ್ತವೆ.



# ನಮಾಝ್‌ನಲ್ಲಿ ನೀವೇನನ್ನುತ್ತೀರಿ?

ನಮಾಝ್ ಮಾನವನನ್ನು ಹೇಗೆ ಅಲ್ಲಾಹನ ಇಬಾದತ್ ಅರ್ಥಾತ್ ದಾಸ್ಯ ಮತ್ತು ಅನುಸರಣೆಗೆ ಅಣಿಗೊಳಿಸುತ್ತದೆ ಎಂಬುದನ್ನು ಹಿಂದಿನ ಉಪನ್ಯಾಸದಲ್ಲಿ ತಿಳಿಸಿದ್ದೇನೆ. ನಮಾಝನ್ನು 'ಫರ್ಝ್' (ಕಡ್ಡಾಯ) ಮತ್ತು ದೇವಾಜ್ಞೆಯೆಂದಷ್ಟೇ ತಿಳಿದುಕೊಂಡು ಕ್ರಮಬದ್ಧವಾಗಿ ನೆರವೇರಿಸುತ್ತಿರುವವನು ನಮಾಝ್‌ನ ದುಆ (ಪ್ರಾರ್ಥನೆ)ಗಳ ಅರ್ಥ ತಿಳಿಯದೆ ಹೋದರೂ ಅವನಲ್ಲಿ ದೇವಭಯ, ಅವನು ಪ್ರತ್ಯಕ್ಷದರ್ಶಿಯಾಗಿರುವನೆಂಬ ಹಾಗೂ ಅವನ ನ್ಯಾಯಾಲಯದ ಮುಂದೆ ಅದೊಂದು ದಿನ ಹಾಜರಾಗಬೇಕೆಂಬ ವಿಶ್ವಾಸವು ಮನಸ್ಸಿನಲ್ಲಿ ಹೇಗೆ ಹಸಿರಾಗಿಯೇ ಉಳಿಯುತ್ತದೆ? ತಾನು ಅಲ್ಲಾಹನ ಹೊರತು ಇತರ ಯಾರ ದಾಸನೂ ಅಲ್ಲ, ಅಲ್ಲಾಹನು ಮಾತ್ರ ತನ್ನ ನಿಜವಾದ ಪ್ರಭು ಮತ್ತು ಅಧಿಕಾರಿ ಎಂಬ ವಿಶ್ವಾಸವು ಹೇಗೆ ನೆಲೆಸಿರುತ್ತದೆ. ಅವನಲ್ಲಿ ಕರ್ತವ್ಯ ಪ್ರಜ್ಞೆ ಮತ್ತು ಆಜ್ಞಾಪಾಲನೆಯ ಆಸಕ್ತಿ ಹೇಗೆ ಉಂಟಾಗುತ್ತದೆ ಮತ್ತು ಮಾನವನ ಇಡೀ ಜೀವಮಾನವನ್ನು ಅಲ್ಲಾಹನ ಇಬಾದತನ್ನಾಗಿ ಮಾಡಲು ಅಗತ್ಯವಾದ ಗುಣ ವಿಶೇಷತೆಗಳು ಹೇಗೆ ಅವನಲ್ಲಿ ಸ್ವಯಂ ಉಂಟಾಗಲಾರಂಭ ವಾಗುತ್ತವೆ ಎಂಬೀ ವಿಷಯಗಳು ನಿಮಗೆ ತಿಳಿದಂತಾಯಿತು.

ಮಾನವನು ನಮಾಝನ್ನು ಅರ್ಥವರಿತು ಮಾಡುತ್ತಲಿದ್ದರೆ, ನಮಾಝ್ ಮಾಡುತ್ತಿರುವಾಗ ತಾನೇನು ಹೇಳುತ್ತಿದ್ದೇನೆಂದು ಅರಿತುಕೊಂಡಿದ್ದರೆ ಅವನ ಯೋಚನೆಗಳ ಮತ್ತು ಅವನ ಗುಣನಡತೆಗಳ ಮೇಲೆ ಎಷ್ಟು ದೊಡ್ಡ ಪರಿಣಾಮ ಗಳುಂಟಾಗುತ್ತವೆ. ಅವನ ವಿಶ್ವಾಸ ಶಕ್ತಿ ಹೇಗೆ ವರ್ಧಿಸುತ್ತಾ ಹೋಗುತ್ತದೆ. ಅವನ ಜೀವನದಲ್ಲಿ ಎಂತಹ ಮಹತ್ವದ ಪರಿವರ್ತನೆಯುಂಟಾಗುವುದು ಎಂಬುದನ್ನು ಈಗ ಹೇಳಬಯಸುತ್ತೇನೆ.

## ಅದಾನ್ ಮತ್ತು ಅದರ ಪ್ರಭಾವ

ಮೊತ್ತಮೊದಲು ಅದಾನ್‌ನ (ನಮಾಝ್‌ನ ಕರೆ) ವಿಷಯ ತೆಗೆದು ಕೊಳ್ಳಿರಿ. ದಿನದಲ್ಲಿ ಐದು ಬಾರಿ ನಿಮ್ಮನ್ನು ಹೀಗೆ ಕರೆಯಲಾಗುತ್ತದೆ: 'ಅಲ್ಲಾಹು ಅಕ್ಬರ್'

‘ಅಲ್ಲಾಹು ಅಕ್ಬರ್’ (ಅಲ್ಲಾಹ್ ಅತ್ಯಂತ ಮಹಾನನು, ಅಲ್ಲಾಹ್ ಅತ್ಯಂತ ಮಹಾನನು), ‘ಅಶ್‌ಹದು ಅಲ್ಲಾ ಇಲಾಹ ಇಲ್ಲಲ್ಲಾಹ್’ (ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲ ವೆಂದು ನಾನು ಸಾಕ್ಷ್ಯ ವಹಿಸುತ್ತೇನೆ), ‘ಅಶ್‌ಹದು ಅನ್ನ ಮುಹಮ್ಮದರ್ರಸೂಲುಲ್ಲಾಹ್’ [ಮುಹಮ್ಮದ್(ಸ) ಅಲ್ಲಾಹನ ಸಂದೇಶವಾಹಕರಾಗಿರುವರೆಂದು ನಾನು ಸಾಕ್ಷ್ಯ ವಹಿಸುತ್ತೇನೆ.], ‘ಹಯ್ಯ ಅಲಸ್ಸಲಾಃ’ (ಬನ್ನಿ ನಮಾಝ್‌ನ ಕಡೆಗೆ), ‘ಹಯ್ಯ ಅಲಲ್ ಫಲಾಹ್’ (ಬನ್ನಿ ವಿಜಯದ ಕಡೆಗೆ)’, ‘ಅಲ್ಲಾಹು ಅಕ್ಬರ್’(ಅಲ್ಲಾಹ್ ಅತ್ಯಂತ ಮಹಾನನು), ‘ಲಾ ಇಲಾಹ ಇಲ್ಲಲ್ಲಾಹ್’ (ಅಲ್ಲಾಹನ ಹೊರತು ಯಾರೂ ಆರಾಧ್ಯರಿಲ್ಲ.)

ನೋಡಿ ಇದೆಂತಹ ಕರೆ! ಈ ಭೂಮಂಡಲದಲ್ಲಿ ತಾವೇ ದೇವರೆಂದು ಹೇಳುವವರೆಲ್ಲಾ ಸುಳ್ಳರು. ಭೂಮಿ–ಆಕಾಶಗಳಲ್ಲೆಲ್ಲಾ ಸರ್ವ ಮಹಾನತೆ ಪಡೆದಿರು ವಾತನು ಒಬ್ಬನೇ. ಅವನೇ ಆರಾಧ್ಯನು. ಬನ್ನಿರಿ, ಅವನನ್ನೇ ಆರಾಧಿಸಿರಿ. ಅವನ ಆರಾಧನೆಯಲ್ಲೇ ನಿಮ್ಮ ಇಹಪರಗಳ ಒಳಿತಿದೆ. ಈ ಕರೆಯನ್ನು ಕೇಳಿ ಕದಲದವ ರಿರುವರೇ? ಹೃದಯದಲ್ಲಿ ಈಮಾನುಳ್ಳವನು ಇಷ್ಟು ದೊಡ್ಡ ಸಾಕ್ಷ್ಯ ಹಾಗೂ ಇಂತಹ ಮಹೋನ್ನತ ಕರೆಯನ್ನು ಕೇಳಿಯೂ ತನ್ನೊಡೆಯನ ಮುಂದೆ ತಲೆ ಬಾಗಲು ಧಾವಿಸದೆ ಇರುವನೇ?

## ವುಝೂ

ಈ ಕರೆಯನ್ನು ಕೇಳಿದೊಡನೆ ನೀವು ಎದ್ದು ಮೊತ್ತಮೊದಲು ನಿಮ್ಮನ್ನೇ ಪರೀಕ್ಷಿಸುತ್ತೀರಿ. ನಿಮ್ಮ ಶರೀರ ಶುದ್ಧವಾಗಿದೆಯೇ ನಿಮ್ಮ ಬಟ್ಟೆಬರೆ ಶುದ್ಧವಾಗಿದೆಯೇ ನಿಮಗೆ ವುಝೂ ಇದೆಯೇ ಎಂಬುದನ್ನು ನೋಡುತ್ತೀರಿ. ಉಭಯಲೋಕಗಳ ಸಾರ್ವಭೌಮ ಪ್ರಭುವಿನ ಮುಂದೆ ಹಾಜರಿ ಕೊಡುವುದು ಲೋಕದ ಇತರ ವಿಷಯಗಳಂತಲ್ಲ. ಇತರ ಕೆಲಸ ಕಾರ್ಯಗಳನ್ನು ಹೇಗೆ ಬೇಕಾದರೂ ಮಾಡಬಹುದು. ಆದರೆ ಇಲ್ಲಿ ಶರೀರ, ಬಟ್ಟೆಬರೆಗಳು ಶುದ್ಧವಾಗುವುದರ ಜೊತೆ ಇನ್ನಷ್ಟು ಶುದ್ಧೀ ಕರಣಗೊಳ್ಳದೆ (ಅಂದರೆ ವುಝೂ ಮಾಡದೆ) ಹಾಜರಿ ಕೊಡುವುದು ಅಸಭ್ಯ ವರ್ತನೆ ಯಾಗಿದೆ ಎಂಬೀ ಭಾವನೆಯೊಂದಿಗೆ ಮೊದಲು ನೀವು ಶುದ್ಧರಾಗಿರುವ ಬಗ್ಗೆ ಸಂತೃಪ್ತರಾಗುತ್ತೀರಿ. ತರುವಾಯ ವುಝೂ ಮಾಡುತ್ತೀರಿ. ಈ ವುಝೂ ಮಾಡುವಾಗ ನಿಮ್ಮ ಅಂಗಾಂಗಗಳನ್ನು ತೊಳೆಯುವುದರ ಜೊತೆಗೆ ನೀವು ಅಲ್ಲಾಹನ ದಿಕ್ರ್ (ಸ್ಮರಣೆ) ಮಾಡುತ್ತಲಿದ್ದರೆ ಮತ್ತು ವುಝೂ ಮಾಡಿ ಆದ ಬಳಿಕ ಪ್ರವಾದಿವರ್ಯರು(ಸ) ಕಲಿಸಿದ ಪ್ರಾರ್ಥನೆಯನ್ನು ಮಾಡಿದರೆ, ಕೇವಲ ನಿಮ್ಮ ಅಂಗಾಂಗಗಳು ಶುದ್ಧವಾಗುವುದಲ್ಲ; ಅದರೊಂದಿಗೆ ನಿಮ್ಮ ಹೃದಯವನ್ನೂ

ತೊಳೆದಂತಾಗುವುದು. ಆ ಪ್ರಾರ್ಥನೆ ಹೀಗಿದೆ: 'ಅಶ್‌ಹದು ಅಲ್ಲಾ ಇಲಾಹ ಇಲ್ಲಲ್ಲಾಹು ವಹ್ದಹೂ ಲಾ ಶರೀಕಲಹೂ ವ ಅಶ್‌ಹದು ಅನ್ನ ಮುಹಮ್ಮದನ್ ಅಬ್ದುಹೂ ವರಸೂಲುಹೂ ಅಲ್ಲಾಹುಮ್ಮಜ್‌ಅಲ್ನೀ ಮಿನತ್ತವ್ವಾಬೀನ ವಜ್‌ಅಲ್ನೀ ಮಿನಲ್ ಮುತತಹ್ಹಿರೀನ್.' ಅರ್ಥಾತ್: ಏಕೈಕ ಅಲ್ಲಾಹನ ಹೊರತು ಬೇರಾರೂ ಆರಾಧ್ಯರಿಲ್ಲವೆಂದು ಮತ್ತು ಮುಹಮ್ಮದ್(ಸ) ಅಲ್ಲಾಹನ ದಾಸರೂ ಸಂದೇಶವಾಹಕರೂ ಆಗಿರುವರೆಂದು ನಾನು ಸಾಕ್ಷ್ಯ ವಹಿಸುತ್ತೇನೆ. ದೇವಾ, ನನ್ನನ್ನು ಪಶ್ಚಾತ್ತಾಪ ಪಟ್ಟು ಮರಳುವವರಲ್ಲಿ ಸೇರಿಸು ಮತ್ತು ನನ್ನನ್ನು ಪರಿಶುದ್ಧರಾಗುವವನಾಗಿ ಮಾಡು.

## ನಿಯ್ಯತ್ (ಸಂಕಲ್ಪ)

ಅನಂತರ ನೀವು ನಮಾಝ್‌ಗೆ ನಿಲ್ಲುತ್ತೀರಿ. ಕಿಬ್ಲಾದತ್ತ ನಿಮ್ಮ ಮುಖವಿದೆ. ನಿರ್ಮಲರಾಗಿ ಸರ್ವಲೋಕಗಳ ಪ್ರಭುವಿನ ಆಸ್ಥಾನದಲ್ಲಿ ಹಾಜರಾಗಿ ಮೊತ್ತಮೊದಲು ನೀವು ಉಚ್ಚರಿಸುವ ಮಾತು 'ಅಲ್ಲಾಹು ಅಕ್ಬರ್' (ಅಲ್ಲಾಹ್ ಮಹಾನನು) ಎಂದಾಗಿದೆ. ಇಷ್ಟು ದೊಡ್ಡ ಸತ್ಯವನ್ನು ಉಚ್ಚರಿಸಿ ಎಲ್ಲಾ ತರದ ಲೌಕಿಕ ವ್ಯವಹಾರಗಳನ್ನು ಕೈ ಬಿಟ್ಟಿರುವಿರೋ ಎಂಬಂತೆ ನೀವು ನಿಮ್ಮ ಎರಡೂ ಹಸ್ತಗಳನ್ನು ಕಿವಿಯ ತನಕ ಎತ್ತುತ್ತೀರಿ ಮತ್ತು ನಿಮ್ಮ ಪ್ರಭುವಿನ ಮುಂದೆ ವಿನೀತರಾಗಿ ಕೈಕಟ್ಟಿ ನಿಲ್ಲುತ್ತೀರಿ. ಆ ಬಳಿಕ ಈ ರೀತಿ ಬಿನ್ನವಿಸುತ್ತೀರಿ:

## ಸ್ತುತಿ ಸ್ತೋತ್ರ

'ಸುಬ್‌ಹಾನಕಲ್ಲಾಹುಮ್ಮ ವಬಿ ಹಮ್ದಿಕ, ವತಬಾರಕಸ್ಮುಕ, ವತ ಆಲಾ ಜದ್ದುಕ, ವಲಾ ಇಲಾಹ ಗೈರುಕ.' ಅರ್ಥಾತ್: ಓ ಅಲ್ಲಾಹ್, ನಾನು ನಿನ್ನ ಪರಿಶುದ್ಧತೆಯನ್ನು ನಿನ್ನ ಕೀರ್ತನೆಯೊಂದಿಗೆ ಘೋಷಿಸುತ್ತೇನೆ. ನಿನ್ನ ನಾಮವು ಮಂಗಲದಾಯಕವಾಗಿದೆ. ನಿನ್ನ ಪೂಜ್ಯತೆಯು ಅತ್ಯುನ್ನತವಾಗಿದೆ ಮತ್ತು ನಿನ್ನ ಹೊರತು ಪೂಜಾರ್ಹರು ಯಾರೂ ಇಲ್ಲ.

## ಅಭಯ ಯಾಚನೆ

ಅನಂತರ ಹೀಗೆ ಹೇಳುತ್ತೀರಿ: **ಅಊದು ಬಿಲ್ಲಾಹಿ ಮಿನಶ್ಶೈತಾನಿರ್ರಜೀಮ್** = ಶಪಿಸಲ್ಪಟ್ಟ ಶೈತಾನನ ದ್ರೋಹ ಹಾಗೂ ದುಷ್ಟತನದಿಂದ ನಾನು ಅಲ್ಲಾಹನ ಅಭಯ ಯಾಚಿಸುತ್ತೇನೆ.)

## ಸೂರಃ ಫಾತಿಹಾ ಪಠಣ

**ಬಿಸ್ಮಿಲ್ಲಾಹಿರ್ರಹ್ಮಾನಿರ್ರಹೀಮ್** = ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ. **ಅಲ್‌ಹಮ್ದುಲಿಲ್ಲಾಹಿ ರಬ್ಬಿಲ್ ಆಲಮೀನ್** = ಸರ್ವ

ಸ್ತೋತ್ರಗಳೂ ಸರ್ವ ಲೋಕಗಳ ಪ್ರಭುವಾದ ಅಲ್ಲಾಹನಿಗೆ. **ಅರ್ರಹ್ಮಾನಿರ್ರಹೀಮ್**= ಪರಮ ದಯಾಳುವೂ ಕರುಣಾನಿಧಿಯೂ ಆಗಿರುತ್ತಾನೆ. **ಮಾಲಿಕಿ ಯೌಮಿದ್ದೀನ್**= ನಿರ್ಣಾಯಕ ದಿನದ ಅಧಿಪತಿಯಾಗಿರುತ್ತಾನೆ. (ಅಂದು ಕರ್ಮಗಳ ವಿಚಾರಣೆಯಾಗಿ ತೀರ್ಪು ನೀಡಲಾಗುವುದು ಮತ್ತು ಪ್ರತಿಯೋರ್ವನಿಗೆ ಅವನವನ ಕರ್ಮಫಲ ಸಿಗುವುದು.) **ಇಯ್ಯಾಕ ನಅ್‌ಬುದು ವಇಯ್ಯಾಕ ನಸ್ತಈನ್** = ನಾವು ನಿನ್ನನ್ನು ಮಾತ್ರ ಆರಾಧಿಸುತ್ತೇವೆ ಮತ್ತು ನಿನ್ನಿಂದ ಮಾತ್ರ ಸಹಾಯ ಯಾಚಿಸುತ್ತೇವೆ. **ಇಹ್‌ದಿನಸ್ಸಿರಾತಲ್ ಮುಸ್ತಕೀಮ್** = ನಮಗೆ ಸನ್ಮಾರ್ಗವನ್ನು ತೋರು. ಸಿರಾತಲ್ಲದೀನ **ಅನ್‌ಅಮ್ತ ಅಲೈಹಿಮ್** = ನಿನ್ನ ಅನುಗ್ರಹಕ್ಕೆ ಪಾತ್ರರಾದವರ ಮಾರ್ಗ. **ಗೈರಿಲ್ ಮಗ್‌ದೂಬಿ ಅಲೈಹಿಮ್ ವಲದ್ದಾಲ್ಲೀನ್** = ನಿನ್ನ ಕ್ರೋಧಕ್ಕೆ ಪಾತ್ರರಾದವರ ಮಾರ್ಗವಲ್ಲ, ಪಥಭ್ರಷ್ಟರ ಮಾರ್ಗವೂ ಅಲ್ಲ. **ಆಮೀನ್** = ದೇವಾ, ತಥಾಸ್ತು. ಒಡೆಯಾ, ನಮ್ಮ ಪ್ರಾರ್ಥನೆಯನ್ನು ಸ್ವೀಕರಿಸು.

ಅನಂತರ ನೀವು ಕುರ್‌ಆನಿನ ಕೆಲವು ಆಯತ್‌ಗಳನ್ನು ಪಠಿಸುತ್ತೀರಿ. ಅವುಗಳಲ್ಲಿ ಪ್ರತಿಯೊಂದರಲ್ಲಿಯೂ ಅಮೃತ ತುಂಬಿದೆ, ಉಪದೇಶವಿದೆ, ಬೋಧನೆ ಇದೆ, ಪಾಠವಿದೆ. ನೀವು ಸೂರಃ ಫಾತಿಹಾದಲ್ಲಿ ಬೇಡಿದ ಸನ್ಮಾರ್ಗದ ಕಡೆಗೆ ಮಾರ್ಗದರ್ಶನ ಮಾಡಲಾಗಿದೆ. ಉದಾಹರಣೆಗೆ ಪವಿತ್ರ ಕುರ್‌ಆನಿನ ಕೆಲವು ಅಧ್ಯಾಯಗಳು–

## ಅಲ್ ಅಸ್ರ್

**ವಲ್ ಅಸ್ರಿ ಇನ್ನಲ್ ಇನ್ಸಾನ ಲಫೀ ಖುಸ್ರ್**= ಕಾಲದಾಣೆ! ನಿಶ್ಚಯವಾಗಿಯೂ ಮನುಷ್ಯನು ನಷ್ಟದಲ್ಲಿಯೇ ಇದ್ದಾನೆ. **ಇಲ್ಲಲ್ಲದೀನ ಆಮನೂ ವಅಮಿಲುಸ್ಸಾಲಿಹಾತಿ**= ನಷ್ಟದಿಂದ ಪಾರಾದವರು ಯಾರೆಂದರೆ ವಿಶ್ವಾಸವಿಟ್ಟು ಸತ್ಕರ್ಮ ಕೈಗೊಂಡವರು. **ವತವಾಸೌ ಬಿಲ್‌ಹಕ್ಕಿ ವತವಾಸೌ ಬಿಸ್ಸಬ್ರ್**= ಸತ್ಯದಲ್ಲಿ ನಡೆಯಲು ಮತ್ತು ಸಹನೆಯೊಂದಿಗೆ ಸತ್ಯದಲ್ಲೇ ನಿಶ್ಚಲರಾಗಿರಲು ಉಪದೇಶಿಸುವವರು.

ವಿನಾಶ ಹಾಗೂ ಭಗ್ನತೆಯಿಂದ ಪಾರಾಗಬೇಕಾದರೆ ವಿಶ್ವಾಸವಿರಿಸಬೇಕು. ಸತ್ಕರ್ಮಗಳನ್ನು ತಾನೇ ಮಾಡುತ್ತಿದ್ದರೆ ಸಾಲದು, ಧರ್ಮದಲ್ಲಿ ಸ್ಥಿರವಾಗಿರುವ ಹಾಗೂ ಇತರರನ್ನು ಸ್ಥಿರ ವಾಗಿರುವಂತೆ ಸಹಾಯಕವಾಗಬಲ್ಲ ಸತ್ಯವಿಶ್ವಾಸಿಗಳ ಒಂದು ಸಮುದಾಯವೂ ಇರಬೇಕು.

## ಅಲ್ ಮಾಊನ್

**ಅರಐತಲ್ಲದೀ ಯುಕದ್ದಿಬು ಬಿದ್ದೀನ್**= ನಿರ್ಣಾಯಕ ದಿನವನ್ನು ನಿರಾಕರಿಸುವವನನ್ನು ಕಂಡೆಯಾ? **ಫದಾಲಿಕಲ್ಲದೀ ಯದುಅ್‌ಉಲ್ ಯತೀಮ್**=

ಅವನೇ ಅನಾಥರನ್ನು ಧಿಕ್ಕರಿಸುವವನು. **ವಲಾಯಹುದ್ದು ಅಲಾ ತಆಮಿಲ್ ಮಿಸ್‌ಕೀನ್** = ದೀನ ದಲಿತರಿಗೆ ತಾನು ಉಣಿಸುವುದಂತಿರಲಿ. ಬಡ ಜನರಿಗೆ ಉಣಿಸಿರಿ ಎಂದು ಇತರರೊಡನೆ ಹೇಳುವುದನ್ನೂ ಇಷ್ಟಪಡುವುದಿಲ್ಲ. **ಫವೈಲುಲ್ಲಿಲ್ ಮುಸಲ್ಲೀನಲ್ಲದೀನಹುಮ್ ಅನ್‌ಸಲಾತಿಹಿಮ್ ಸಾಹೂನ್ ಅಲ್ಲದೀನಹುಮ್ ಯುರಾಊನ ವಯಮ್ನ ಊನಲ್ ಮಾಊನ್** = (ನಿರ್ಣಾಯಕ ದಿನದ ಮೇಲೆ ವಿಶ್ವಾಸವಿರಿಸದ ಕಾರಣ) ನಮಾಝ್‌ನ ಬಗ್ಗೆ ಅಸಡ್ಡೆ ತೋರುವ ನಮಾಝಿಗಳಿಗೆ (ನಮಾಝ್ ಮಾಡುವವರಿಗೆ) ವಿನಾಶವಿದೆ. ಅವರು ನಮಾಝ್ ಮಾಡುವುದಾದರೂ ಕೇವಲ ತೋರಿಕೆಗಾಗಿ. ಅಗತ್ಯವುಳ್ಳವರಿಗೆ ಅತ್ಯಲ್ಪ ವಸ್ತುವನ್ನಾದರೂ ಕೊಡುವಾಗ ಅವರ ಮನಸ್ಸು ನೋಯುತ್ತದೆ.

ಪರಲೋಕದ ವಿಶ್ವಾಸವು ಇಸ್ಲಾಮಿನ ಜೀವಾಳವಾಗಿದ್ದು ಅದರ ಹೊರತು ದೇವಮಾರ್ಗದಲ್ಲಿ ನಡೆಯಲು ಸಾಧ್ಯವೇ ಇಲ್ಲವೆಂದು ಇದರಿಂದ ತಿಳಿಯುತ್ತದೆ.

## ಅಲ್ ಹುಮಝ್ಝಃ

**ವೈಲುಲ್ಲಿಕುಲ್ಲಿಹುಮಝ್ಝತಿಲ್ಲುಮಝಃ** = ಮೂದಲಿಸುವಾತನ ಬಗೆಗೂ ಹಿಂದಾಡುವವನಿಗೆ ವಿನಾಶವಿದೆ. **ಅಲ್ಲದೀ ಜಮಅಮಾಲಂವಅದ್ದದಃ** = ಸಂಪತ್ತನ್ನು ಕೂಡಿ ಹಾಕಿ ಅದನ್ನು ಎಣಿಸಿ ಎಣಿಸಿ ಇಡುತ್ತಾನೆ. **ಯಹ್ಸಬು ಅನ್ನಮಾಲಹೂ ಅಖ್‌ಲದಃ** = ಅವನು ತನ್ನ ಸಂಪತ್ತು ಸದಾ ತನ್ನಲ್ಲೇ ಉಳಿಯುವುದೆಂದು ಭಾವಿಸುತ್ತಾನೆ. **ಕಲ್ಲಾಲಯುಂಬದನ್ನ ಫಿಲ್‌ಹುತಮಃ** = ಖಂಡಿತ ಇಲ್ಲ, ಒಂದು ದಿನ ಅವನು ಸಾಯುವನು ಮತ್ತೆ ಹುತಮಃವನ್ನು ಸೇರುವನು. **ವಮಾಅದ್‌ರಾಕಮಲ್‌ಹುತಮಃ**= ಹುತಮಃ ಏನಾಗಿರುತ್ತದೆಂದು ನಿನಗೇನು ಗೊತ್ತು? **ನಾರುಲ್ಲಾಹಿಲ್ ಮೂಕದತುಲ್ಲತೀ ತತ್ತಲಿಉ ಅಲಲ್ ಅಫ್‌ಇದಃ**= ಅಲ್ಲಾಹನಿಂದ ಉರಿಸಲ್ಪಟ್ಟ ಅಗ್ನಿಯದು. ಅದರ ಜ್ವಾಲೆಗಳು ಹೃದಯ ವನ್ನಾವರಿಸುತ್ತವೆ. **ಇನ್ನಹಾ ಅಲೈಹಿಮ್ ಮುಅ್‌ಸದತುನ್ ಫೀ ಅಮದಿಮ್ಮುಮದ್ದದಃ**= ಅವು ಅತ್ಯಂತ ಎತ್ತರವಾದ ಸ್ತಂಭಗಳಂತಿರುವ ಜ್ವಾಲೆಗಳ ರೂಪದಲ್ಲಿ ಅವರನ್ನು ಆವರಿಸಿಕೊಳ್ಳುವುವು.

ಹೀಗೆ ನೀವು ನಮಾಝ್‌ನಲ್ಲಿ ಎಷ್ಟು ಸೂರಃಗಳನ್ನು ಅಥವಾ ಆಯತ್‌ಗಳನ್ನು ಪಠಿಸುತ್ತೀರೋ ಅವು ನಿಮಗೆ ಒಂದಲ್ಲೊಂದು ಅತ್ಯುತ್ತಮ ಉಪದೇಶ ಅಥವಾ ಮಾರ್ಗದರ್ಶನವನ್ನೀಯುತ್ತವೆ. ನೀವು ಇಹದಲ್ಲಿ ಪಾಲಿಸಬೇಕಾದ ಆಜ್ಞೆಗಳಾವುವೆಂದು ನಿಮಗೆ ತೋರಿಸಿ ಕೊಡುತ್ತವೆ.

## ರುಕೂಅ್

ಈ ಆದೇಶಗಳನ್ನು ಪಠಿಸಿದ ಬಳಿಕ ನೀವು **'ಅಲ್ಲಾಹು ಅಕ್ಬರ್'** ಎನ್ನುತ್ತಾ

ರುಕೂಅ್ ಮಾಡುತ್ತೀರಿ (ಬಾಗುತ್ತೀರಿ). ಮೊಣಕಾಲುಗಳ ಮೇಲೆ ಕೈಗಳನ್ನಿರಿಸಿ ನಿಮ್ಮ ಒಡೆಯನೆದುರು ಬಾಗುತ್ತೀರಿ ಮತ್ತು **'ಸುಬ್‌ಹಾನ ರಬ್ಬಿಯಲ್ ಅಝೀಮ್'** (ಪೂಜ್ಯನಾದ ನನ್ನ ರಕ್ಷಕನು ಪರಿಶುದ್ಧನಾಗಿರುತ್ತಾನೆ) ಎಂದು ಹೇಳುತ್ತೀರಿ. ಅನಂತರ ನೆಟ್ಟಗೆ ನಿಂತು **'ಸಮಿಅಲ್ಲಾಹು ಲಿಮನ್ ಹಮಿದಃ'** (ಅಲ್ಲಾಹನ ಸ್ತುತಿಗೈದವನ ಮಾತನ್ನು ಅಲ್ಲಾಹನು ಆಲಿಸಿದನು) ಎನ್ನುತ್ತೀರಿ.

## ಸುಜೂದ್

ಆ ಬಳಿಕ **'ಅಲ್ಲಾಹು ಅಕ್ಬರ್'** ಎನ್ನುತ್ತಾ ಸಜ್ದಾ(ಸಾಷ್ಟಾಂಗ)ದಲ್ಲಿ ಎರಗಿ **'ಸುಬ್‌ಹಾನ ರಬ್ಬಿಯಲ್ ಅಅ್‌ಲಾ'** (ಅತ್ಯುನ್ನತನೂ ಅತ್ಯಂತ ಶ್ರೇಷ್ಠನೂ ಆದ ನನ್ನ ರಕ್ಷಕನು ಪಾವನನಾಗಿರುತ್ತಾನೆ) ಎಂದು ಹೇಳುತ್ತೀರಿ. ಅನಂತರ **'ಅಲ್ಲಾಹು ಅಕ್ಬರ್'** ಎನ್ನುತ್ತಾ ತಲೆ ಎತ್ತಿ ಭಕ್ತಿಭಾವದಿಂದ ಕುಳಿತುಕೊಂಡು ಈ ದುಆ (ಪ್ರಾರ್ಥನೆ) ಮಾಡುತ್ತೀರಿ:

## ಅತ್ತಹಿಯ್ಯಾತ್

**ಅತ್ತಹಿಯ್ಯಾತುಲಿಲ್ಲಾಹಿ ವಸ್ಸಲವಾತು ವತ್ತಯ್ಯಿಬಾತು** = ನಮ್ಮ ಎಲ್ಲಾ ವಂದನೆಗಳು, ಎಲ್ಲಾ ನಮಾಝ್‌ಗಳು ಮತ್ತು ಎಲ್ಲಾ ಪಾವಿತ್ರ್ಯಗಳು ಅಲ್ಲಾಹನಿಗೇ ಆಗಿವೆ. **ಅಸ್ಸಲಾಮು ಅಲೈಕ ಅಯ್ಯುಹನ್ನಬಿಯ್ಯು ವ ರಹ್ಮತುಲ್ಲಾಹಿ ವಬರಕಾತುಹೂ** = ಓ ಪ್ರವಾದಿಯವರೇ ನಿಮ್ಮ ಮೇಲೆ ಶಾಂತಿ, ಕರುಣೆ ಮತ್ತು ಸಮೃದ್ಧಿ ಉಂಟಾಗಲಿ. **ಅಸ್ಸಲಾಮು ಅಲೈನಾ ವಅಲಾ ಇಬಾದಿಲ್ಲಾಹಿಸ್ಸಾಲಿಹೀನ್** = ನಮ್ಮ ಮೇಲೂ ಅಲ್ಲಾಹನ ಎಲ್ಲಾ ಸದ್ಭಕ್ತರ (ಸಜ್ಜನದಾಸರ) ಮೇಲೆ ಶಾಂತಿ ಇರಲಿ. **ಅಶ್‌ಹದು ಅಲ್ಲಾ ಇಲಾಹ ಇಲ್ಲಲ್ಲಾಹು ವ ಅಶ್‌ಹದು ಅನ್ನಮುಹಮ್ಮದನ್ ಅಬ್‌ದುಹೂ ವರಸೂಲುಹೂ** = ಅಲ್ಲಾಹನ ಹೊರತು ಯಾವ ಆರಾಧ್ಯರೂ ಇಲ್ಲವೆಂದು ನಾನು ಸಾಕ್ಷ್ಯ ವಹಿಸುತ್ತೇನೆ. ಮುಹಮ್ಮದ್(ಸ) ಅಲ್ಲಾಹನ ದಾಸರೂ ಪ್ರವಾದಿಯೂ ಆಗಿರುತ್ತಾರೆಂದೂ ನಾನು ಸಾಕ್ಷ್ಯ ನುಡಿಯುತ್ತೇನೆ.

ಈ ಸಾಕ್ಷ್ಯ ಹೇಳುವಾಗ ನೀವು ಬಲತೋಳ ಬೆರಳನ್ನೆತ್ತುತ್ತೀರಿ. ಇದು ನಮಾಝ್‌ನಲ್ಲಿ ನಿಮ್ಮ ಮೂಲ ವಿಶ್ವಾಸದ ಈ ಘೋಷಣೆಯನ್ನು ಬಾಯಿಯಿಂದ ಹೇಳುವಾಗ ಅದರ ಮೇಲೆ ಇನ್ನಷ್ಟು ಒತ್ತು ನೀಡಲಿಕ್ಕಾಗಿದೆ. ಇದಾದ ಬಳಿಕ ನೀವು ದರೂದ್ ಪಠಿಸುತ್ತೀರಿ.

## ಸ್ವಸ್ತಿ ವಚನ

**'ಅಲ್ಲಾಹುಮ್ಮಸಲ್ಲಿ ಅಲಾ ಸಯ್ಯಿದಿನಾ ವಮೌಲಾನಾ ಮುಹಮ್ಮದಿಂವಅಲಾ**

**ಆಲಿ ಮುಹಮ್ಮದಿನ್ ಕಮಾ ಸಲ್ಲೈತ ಅಲಾ ಇಬ್‌ರಾಹೀಮ ವಅಲಾ ಆಲಿ ಇಬ್‌ರಾಹೀಮ ಇನ್ನಕ ಹಮೀದುಂಮಜೀದ್. ಅಲ್ಲಾಹುಮ್ಮ ಬಾರಿಕ್ ಅಲಾ ಸಯ್ಯಿದಿನಾ ವ ಮೌಲಾನಾ ಮುಹಮ್ಮದಿನ್ ವಅಲಾ ಆಲಿ ಮುಹಮ್ಮದಿನ್ ಕಮಾ ಬಾರಕ್‌ತ ಅಲಾ ಇಬ್‌ರಾಹೀಮ ವಅಲಾ ಆಲಿ ಇಬ್‌ರಾಹೀಮ ಇನ್ನಕ ಹಮೀದುಂಮಜೀದ್.'** ಅರ್ಥಾತ್: ಓ ಅಲ್ಲಾಹ್, ನೀನು ಇಬ್ರಾಹೀಮ್(ಅ) ಮತ್ತು ಅವರ ಸಂತಾನದ ಮೇಲೆ ಕೃಪೆ ದೋರಿದಂತೆಯೇ ನಮ್ಮ ನೇತಾರರೂ ಮಾರ್ಗದರ್ಶಕರೂ ಆದ ಮುಹಮ್ಮದ್‌ರ(ಸ) ಮೇಲೆ ಮತ್ತು ಅವರ ವಂಶದ ಮೇಲೆ ಕೃಪೆದೋರು. ಓ ಅಲ್ಲಾಹ್, ನೀನು ಇಬ್ರಾಹೀಮ್ ಮತ್ತು ಅವರ ಸಂತಾನದ ಮೇಲೆ ಸಮೃದ್ಧಿಯನ್ನಿಳಿಸಿದಂತೆಯೇ ನಮ್ಮ ಸರದಾರರೂ ಮಾರ್ಗದರ್ಶಕರೂ ಆದ ಮುಹಮ್ಮದ್‌ರ(ಸ) ಮೇಲೆ ಮತ್ತು ಅವರ ವಂಶದ ಮೇಲೆ ಸಮೃದ್ಧಿಯನ್ನಿಳಿಸು. ನಿಶ್ಚಯವಾಗಿಯೂ ನೀನು ಅತ್ಯಂತ ಸ್ತುತ್ಯರ್ಹನೂ ಪೂಜ್ಯನೂ ಆಗಿರುತ್ತೀಯೆ.

ಈ ದರೂದ್ ಪಠಣದ ಬಳಿಕ ನೀವು ಅಲ್ಲಾಹನೊಡನೆ ಹೀಗೆ ಯಾಚಿಸುತ್ತೀರಿ–

## ಪ್ರಾರ್ಥನೆ

**ಅಲ್ಲಾಹುಮ್ಮ ಇನ್ನೀ ಅಊದು ಬಿಕ ಮಿನ್ ಅದಾಬಿ ಜಹನ್ನಮ ವ ಅಊದು ಬಿಕ ಮಿನ್ ಅದಾಬಿಲ್ ಕಬ್‌ರಿ ಅಊದು ಬಿಕ ಮಿನ್ ಫಿತ್‌ನತಿಲ್ ಮಸೀಹಿದ್ದಜ್ಜಾಲ್ ವಅಊದು ಬಿಕ ಮಿನ್ ಫಿತ್‌ನತಿಲ್ ಮಹ್‌ಯಾ ವಲ್ ಮಮಾತಿ ಅಊದುಬಿಕ ಮಿನಲ್ ಮಅ್‌ಸಿಮಿ ವಲ್ ಮಗ್ರಿಮ್.** ಅರ್ಥಾತ್: "ದೇವಾ, ನಾನು ಜಹನ್ನಮ್‌ನ (ನರಕ) ಯಾತನೆಯಿಂದ ನಿನ್ನ ಆಶ್ರಯ ಬೇಡುತ್ತೇನೆ. ಸಮಗ್ರ ಭೂಮಂಡಲದಲ್ಲಿ ಹಬ್ಬಿ ಜನರನ್ನು ಪಥಭ್ರಷ್ಟರನ್ನಾಗಿ ಮಾಡುವ ದಜ್ಜಾಲನ ಕೀಟಲೆಯಿಂದ ನಿನ್ನ ಆಶ್ರಯ ಬೇಡುತ್ತೇನೆ. ಜೀವನ ಮರಣಗಳ ಅನಿಷ್ಟಗಳಿಂದ ನಿನ್ನ ಆಶ್ರಯ ಬೇಡುತ್ತೇನೆ. ದುಷ್ಕರ್ಮಗಳ ಜವಾಬ್ದಾರಿ ಮತ್ತು ಋಣಭಾರದಿಂದಲೂ ನಿನ್ನ ಆಶ್ರಯ ಬೇಡುತ್ತೇನೆ."

ಈ ದುಆದೊಂದಿಗೆ ನಿಮ್ಮ ನಮಾಝ್ ಪೂರ್ಣಗೊಂಡಿತು. ಇನ್ನು ನೀವು ನಿಮ್ಮ ಒಡೆಯನ ಆಸ್ಥಾನದಿಂದ ಮರಳುತ್ತೀರಿ. ಆಗ ಪ್ರಪ್ರಥಮವಾಗಿ ಮಾಡುವುದೇನು?

## ಸಲಾಮ್ ಹೇಳುವುದು

**ಅಸ್ಸಲಾಮು ಅಲೈಕುಮ್ ವರಹ್ಮತುಲ್ಲಾಃ** ಎನ್ನುತ್ತಾ ಬಲಕ್ಕೂ ಎಡಕ್ಕೂ ಮುಖ ತಿರುಗಿಸಿ ನೆರೆದವರಿಗೆ ಹಾಗೂ ಜಗತ್ತಿನ ಸಕಲ ವಸ್ತುಗಳಿಗೆ ಶಾಂತಿ ಮತ್ತು

ಕರುಣೆಯನ್ನು ಬಯಸುತ್ತೀರಿ. ಅಂದರೆ ಅಲ್ಲಾಹನ ಆಸ್ಥಾನದಿಂದ ಮರಳುವಾಗ ಇಡೀ ಜಗತ್ತಿಗಾಗಿ ತಂದ ಶುಭ ಸಂದೇಶವಿದು.

ನಸುಕಿನಲ್ಲೇ ಎದ್ದು, ಲೌಕಿಕ ಕೆಲಸ–ಕಾರ್ಯಗಳನ್ನು ಆರಂಭಿಸುವುದಕ್ಕೆ ಮುಂಚೆ ನೀವು ಮಾಡುವ ನಮಾಝ್ ಇದುವೇ ಆಗಿದೆ. ಅನಂತರ ಕೆಲವು ತಾಸುಗಳ ತನಕ ನಾನಾ ಕೆಲಸಗಳಲ್ಲಿ ನಿರತರಾಗಿ, ಮಧ್ಯಾಹ್ನದ ವೇಳೆ ದೇವ ಸನ್ನಿಧಿಯಲ್ಲಿ ಹಾಜರಾಗಿ ಪುನಃ ಇದೇ ನಮಾಝ್ ಮಾಡುತ್ತೀರಿ. ಇದಾದ ಕೆಲವು ತಾಸುಗಳ ಬಳಿಕ ಸಂಜೆ ಇದೇ ನಮಾಝ್ ಮಾಡುತ್ತೀರಿ ಮತ್ತೂ ಕೆಲವು ತಾಸುಗಳ ಬಳಿಕ ಸೂರ್ಯಾಸ್ತಮಾನವಾದ ಕೂಡಲೇ ಇದೇ ನಮಾಝನ್ನು ಪುನರಾವರ್ತಿಸುತ್ತೀರಿ. ಆ ಬಳಿಕ ಲೌಕಿಕ ಕೆಲಸಗಳಿಂದ ಮುಕ್ತರಾಗಿ, ಮಲಗುವುದಕ್ಕೆ ಮುಂಚೆ ಕೊನೆಯ ಬಾರಿ ನಿಮ್ಮ ಒಡೆಯನ ಮುಂದೆ ಹಾಜರಿ ಕೊಡುತ್ತೀರಿ. ಈ ನಮಾಝ್ 'ವಿತ್ರ್' ನಮಾಝ್‌ನೊಂದಿಗೆ ಕೊನೆಗೊಳ್ಳುತ್ತದೆ. ಅದರ ಮೂರನೆಯ ರಕಅತ್‌ನಲ್ಲಿ ನೀವು ನಿಮ್ಮ ಒಡೆಯನೊಂದಿಗೆ ಒಂದು ಮಹತ್ತಾದ ಕರಾರನ್ನು ಮಾಡುತ್ತೀರಿ. ಇದನ್ನು 'ದುಆಯೆ ಕುನೂತ್' ಎನ್ನುತ್ತಾರೆ. 'ಕುನೂತ್' ಎಂದರೆ ಅಲ್ಲಾಹನ ಮುಂದೆ ತನ್ನ ದೈನ್ಯತೆ, ವಿನೀತಭಾವ, ಅನುಸರಣೆ ಮತ್ತು ಆರಾಧನೆಗಳ ಕರಾರು.

ನೀವು ಈ ಕರಾರನ್ನು ಯಾವ ಶಬ್ದಗಳಲ್ಲಿ ಮಾಡುತ್ತೀರೆಂಬುದನ್ನು ಗಮನಿಸಿರಿ.

## ಕುನೂತ್‌ನ ಪ್ರಾರ್ಥನೆ

**ಅಲ್ಲಾಹುಮ್ಮ ಇನ್ನಾ ನಸ್ತಈನುಕ, ವ ನಸ್ತಗ್ಫಿರುಕ, ವ ನುಅ್‌ಮಿನುಬಿಕ, ವ ನತವಕ್ಕಲು ಅಲೈಕ, ವ ನುಸ್ನೀ ಅಲೈಕಲ್ ಖೈರ್** = ದೇವಾ, ನಾವು ನಿನ್ನಿಂದಲೇ ಸಹಾಯ ಬೇಡುತ್ತೇವೆ. ನಿನ್ನೊಡನೆಯೇ ಪಾಪಗಳಿಗೆ ಕ್ಷಮೆ ಯಾಚಿಸುತ್ತೇವೆ. ನಿನ್ನ ಮೇಲೆಯೇ ವಿಶ್ವಾಸವಿರಿಸುತ್ತೇವೆ. ನಿನ್ನ ಮೇಲೆ ಭರವಸೆ ಇಡುತ್ತೇವೆ. ಸರ್ವಸ್ತುತಿಯನ್ನು ನಿನಗಾಗಿ ಮೀಸಲಿಡುತ್ತೇವೆ. **ವನಶ್ಕುರುಕ ವಲಾ ನಕ್‌ಫುರುಕ ವನಖ್‌ಲಉ ವನತ್‌ರುಕು ಮಂಯ್ಯಫ್‌ಜುರುಕ** = ನಾವು ನಿನಗೆ ಕೃತಜ್ಞತೆ ಸಲ್ಲಿಸುತ್ತೇವೆ; ಕೃತಘ್ನರಾಗುವುದಿಲ್ಲ. ನಿನ್ನ ಆಜ್ಞೋಲ್ಲಂಘಕರ ಸ್ನೇಹ ಬಿಟ್ಟು ಬಿಡುತ್ತೇವೆ. ಅವರೊಂದಿಗೆ ಯಾವ ಸಂಬಂಧವನ್ನೂ ಇರಿಸುವುದಿಲ್ಲ. **ಅಲ್ಲಾಹುಮ್ಮ ಇಯ್ಯಾಕ ನಅ್‌ಬುದು ವ ಲಕ ನುಸಲ್ಲೀ ವನಸ್ಜುದು ವ ಇಲೈಕ ನಸ್‌ಆ ವನಹ್‌ಫಿಝ್** = ದೇವಾ, ನಾವು ನಿನ್ನನ್ನೇ ಆರಾಧಿಸುತ್ತೇವೆ. ನಿನಗಾಗಿಯೇ ನಮಾಝ್ ಮಾಡುತ್ತೇವೆ ಮತ್ತು ಸಜ್ದ ಮಾಡುತ್ತೇವೆ. ನಮ್ಮ ಸರ್ವ ಪ್ರಯತ್ನ ಪರಿಶ್ರಮಗಳು ನಿನ್ನ

ಸಂಪ್ರೀತಿಗಾಗಿಯೇ ಇವೆ. **ವನರ್‌ಜೂ ರಹ್‌ಮತಕ ವನಖ್‌ಶಾ ಅದಾಬಕ ಇನ್ನ ಅದಾಬಕ ಬಿಲ್ ಕುಫ್ಫಾರಿ ಮುಲ್‌ಹಿಕ್** = ನಾವು ನಿನ್ನ ಕರುಣೆಯನ್ನೇ ಬಯಸುತ್ತೇವೆ. ನಿನ್ನ ಯಾತನೆಯನ್ನು ಭಯಪಡುತ್ತೇವೆ. ನಿಶ್ಚಯವಾಗಿಯೂ ನಿನ್ನ ಯಾತನೆಯು ಸತ್ಯನಿಷೇಧಿಗಳ ಮೇಲೆ ರಗುವುದು.

## ನಮಾಝ್ ಮತ್ತು ಚಾರಿತ್ರ್ಯ ನಿರ್ಮಾಣ

ಬಂಧುಗಳೇ!

ಸ್ವಲ್ಪ ಆಲೋಚಿಸಿರಿ, ದಿನಕ್ಕೆ ಐದು ಬಾರಿ ಈ ಅದಾನ್ ಕರೆಯನ್ನು ಕೇಳಿ, ಎಷ್ಟೊಂದು ಮಹತ್ತಾದ ವಿಷಯದ ಸಾಕ್ಷ್ಯ ನೀಡಲಾಗುತ್ತದೆಂದು ಅರಿಯುವ ಹಾಗೂ ಪ್ರತಿಸಲವೂ ಈ ಕರೆಯನ್ನು ಕೇಳಿದೊಡನೆ ತನ್ನ ಎಲ್ಲಾ ಕೆಲಸಗಳನ್ನು ಬದಿಗಿರಿಸಿ ತನ್ನ ಮತ್ತು ಇಡೀ ವಿಶ್ವದ ಒಡೆಯನೆಂದು ನಂಬಿದ ಆ ಪರಮ ಪಾವನನ ಆಸ್ಥಾನದ ಕಡೆಗೆ ಧಾವಿಸುವ ಮತ್ತು ಪ್ರತಿ ನಮಾಝ್‌ಗಿಂತ ಮುಂಚೆ ಶರೀರ ಹಾಗೂ ಮನಸ್ಸನ್ನು ವುಝೂ ಮೂಲಕ ಶುದ್ಧಗೊಳಿಸುವ ಹಾಗೂ ನಾನೀಗ ವಿವರಿಸಿರುವ ಎಲ್ಲಾ ಮಾತುಗಳನ್ನು ಅರ್ಥವರಿತು ಹಾಗೂ ಬೋಧ ಸಹಿತ ನಮಾಝ್‌ನಲ್ಲಿ ಆಗಾಗ ಹೇಳುವ ಒಬ್ಬನಲ್ಲಿ ದೇವ ಭಯ ವುಂಟಾಗದಿರುವುದಾದರೂ ಹೇಗೆ? ಅಂಥವನಿಗೆ ದೇವಾದೇಶಗಳನ್ನು ಉಲ್ಲಂಘಿಸಿ ನಡೆಯಲು ನಾಚಿಕೆಯಾಗದೇ? ಪಾಪಕಾರ್ಯ ಹಾಗೂ ದುರಾಚಾರಗಳ ಕಳಂಕ ದೊಂದಿಗೆ ಪದೇ ಪದೇ ಅಲ್ಲಾಹನ ಮುಂದೆ ಹಾಜರಾಗುವಾಗ ಅವನ ಆತ್ಮವು ನಡುಗಲಾರದೆ? ಒಬ್ಬನು ನಮಾಝ್‌ನಲ್ಲಿ ದೇವದಾಸ್ಯದ ಮತ್ತು ಅನುಸರಣೆಯ ಪ್ರತಿಜ್ಞೆ ಮಾಡಿ, ಅವನು ನಿರ್ಣಾಯಕ ದಿನದ ಅಧಿಪತಿ ಎಂಬುದನ್ನು ಅಂಗೀಕರಿಸಿ ತನ್ನ ಕೆಲಸ ಕಾರ್ಯಗಳ ಕಡೆಗೆ ಮರಳಿ ಬಂದಾಗ ಸುಳ್ಳು, ಮೋಸ, ವಂಚನೆ, ಲಂಚ ಮತ್ತು ಬಡ್ಡಿಯ ವ್ಯವಹಾರ, ಜನರಿಗೆ ಕೀಟಲೆ ಕೊಡುವುದು ಮತ್ತು ಅಶ್ಲೀಲ, ಅನಾಚಾರ, ನಿರ್ಲಜ್ಜೆಯ ಕಾರ್ಯಗಳೇ ಮೊದಲಾದ ಎಲ್ಲಾ ದುಷ್ಕೃತ್ಯಗಳ ಹೊರೆಯನ್ನು ಹೊತ್ತುಕೊಂಡು ಅಲ್ಲಾಹನ ಸನ್ನಿಧಿಗೆ ಹೋಗಿ ಆ ಪ್ರತಿಜ್ಞಾ ವಾಕ್ಯಗಳನ್ನು ಪುನಃ ಉಚ್ಚರಿಸಲು ಅವನಿಗೆ ಧೈರ್ಯ ಬರುವುದಾದರೂ ಹೇಗೆ? ನೀವು ಚೆನ್ನಾಗಿ ಬೋಧವರಿತು 'ನಾವು ನಿನ್ನನ್ನು ಮಾತ್ರ ಆರಾಧಿಸುತ್ತೇವೆ, ನಿನ್ನಿಂದ ಮಾತ್ರ ಸಹಾಯ ಬೇಡುತ್ತೇವೆ' ಎಂದು ಮೂವತ್ತಾರು ಸಲ ಅಲ್ಲಾಹನೊಂದಿಗೆ ಪ್ರತಿಜ್ಞೆ ಮಾಡಿ ಆ ಬಳಿಕ, ದೇವೇತರರ ಆರಾಧನೆ ಮಾಡು ವುದೂ ಸಹಾಯಕ್ಕಾಗಿ ಇತರರ ಮುಂದೆ ಕೈ ಚಾಚುವುದೂ ಹೇಗೆ ಸಾಧ್ಯ? ನೀವು ಮಾಡಿದ ಪ್ರತಿಜ್ಞೆಯನ್ನು ಒಮ್ಮೆಯಾದರೂ ಮುರಿದರೆ ಎರಡನೆಯ ಸಲ

ದೇವನ ಆಸ್ಥಾನದಲ್ಲಿ ಹಾಜರಾಗಲು ನಿಮ್ಮ ಆತ್ಮಸಾಕ್ಷಿ ಒಪ್ಪದು. ನಿಮಗೆ ನಾಚಿಕೆಯಾಗುವುದು ಮತ್ತು ನಿಮ್ಮ ಮನಸ್ಸಾಕ್ಷಿ ನಿಮ್ಮನ್ನು ಶಪಿಸುವುದು. ಹೀಗಿರುವಾಗ ಜೀವಮಾನವಿಡೀ ದಿನಂಪ್ರತಿ ಐದೈದು ಬಾರಿ ನಮಾಝ್ ಮಾಡಿಯೂ ನಿಮ್ಮ ಆಚಾರಗಳು ಶುದ್ಧಿಯಾಗದಿರಲು, ನಿಮ್ಮ ಚಾರಿತ್ರ್ಯದಲ್ಲಿ ಸುಧಾರಣೆಯಾಗದಿರಲು ಮತ್ತು ನಿಮ್ಮ ಜೀವನದಲ್ಲಿ ಉತ್ತಮ ಬದಲಾವಣೆಯಾಗದಿರಲು ಸಾಧ್ಯವೇ? ಇದಕ್ಕಾಗಿಯೇ ಅಲ್ಲಾಹನು ನಮಾಝ್‌ನ ವಿಶೇಷತೆಯನ್ನು, 'ನಿಶ್ಚಯವಾಗಿಯೂ ನಮಾಝ್ ಮಾನವನನ್ನು ನಿರ್ಲಜ್ಜೆ ಮತ್ತು ದುಷ್ಕೃತ್ಯಗಳಿಂದ ತಡೆಯುತ್ತದೆ' ಎಂದು ವರ್ಣಿಸಿರುತ್ತಾನೆ. ಆದರೆ ಇಷ್ಟೊಂದು ಮಹತ್ತಾದ ಪಳಗಿಸುವ ಸಾಧನದಿಂದಲೂ ಒಬ್ಬನ ಚಾರಿತ್ರ್ಯ ನಿರ್ಮಾಣವಾಗದಿದ್ದರೆ ಅದು ಅವನ ಹುಟ್ಟುಗುಣವೇ ಹೊರತು ನಮಾಝ್‌ನ ದೋಷವಲ್ಲ. ಕೊಳೆಯನ್ನು ದೂರಗೊಳಿಸುವುದು ನೀರು ಮತ್ತು ಸಾಬೂನುಗಳ ಗುಣ. ಆದರೆ ಇದ್ದಲಿನ ಕರಿಬಣ್ಣವನ್ನು ಹೋಗಲಾಡಿಸಲು ಅವುಗಳಿಂದಾಗದಿದ್ದರೆ ಅದು ನೀರು ಮತ್ತು ಸಾಬೂನಿನ ದೋಷವಲ್ಲ. ಇದ್ದಲಿನ ಕರಿಬಣ್ಣವೇ ಇದಕ್ಕೆ ಕಾರಣ.

ಸಹೋದರರೇ, ನಿಮ್ಮ ನಮಾಝ್‌ಗಳಲ್ಲಿ ಒಂದು ದೊಡ್ಡ ಕೊರತೆ ಇದೆ. ನೀವು ನಮಾಝ್‌ನಲ್ಲಿ ಹೇಳುವುದೆಲ್ಲವನ್ನೂ ಅರ್ಥವರಿತು ಹೇಳುವುದಿಲ್ಲ. ನೀವು ಒಂದಿಷ್ಟು ಸಮಯವನ್ನು ವಿನಿಯೋಗಿಸಿದರೆ ಆ ಎಲ್ಲಾ ದುಆಗಳ ಅರ್ಥವನ್ನು ನಿಮ್ಮ ಮಾತೃಭಾಷೆಯಲ್ಲಿ ಕಲಿತುಕೊಳ್ಳಬಹುದು. ಇದರಿಂದ ಅವುಗಳ ಅರ್ಥವನ್ನು ಗ್ರಹಿಸಲು ಸಾಧ್ಯವಾಗುವುದು.



# ಸಾಮೂಹಿಕ ನಮಾಝ್

ಬಂಧುಗಳೇ,

ನಾನು ಹಿಂದಿನ ಉಪನ್ಯಾಸದಲ್ಲಿ ನಮಾಝ್‌ನ ಪ್ರಯೋಜನಗಳನ್ನು ಮಾತ್ರ ವಿವರಿಸಿದ್ದೆ. ಆ ವಿವರಣೆಯಿಂದ ಅದು ಎಷ್ಟು ಮಹತ್ತರವಾಗಿದೆ ಮತ್ತು ಅದು ಮಾನವನಲ್ಲಿ ದಾಸ್ಯದ ಪರಿಪೂರ್ಣತೆಯನ್ನು ಮತ್ತು ಋಣ ಸಂದಾಯದ ಯೋಗ್ಯತೆಯನ್ನು ಹೇಗೆ ಉಂಟುಮಾಡುತ್ತದೆಂದು ನಿಮಗೆ ಮನವರಿಕೆಯಾಗಿರಬಹುದು. ಈಗ ಸಾಮೂಹಿಕವಾಗಿ ಮಾಡುವ ನಮಾಝ್‌ನ ಪ್ರಯೋಜನಗಳನ್ನು ತಿಳಿಸುವೆನು. ಅಲ್ಲಾಹನು ತನ್ನ ಕೃಪೆಯಿಂದ ಒಂದೇ ವಸ್ತುವಿನಲ್ಲಿ ಅನೇಕ ಅನುಗ್ರಹಗಳನ್ನು ನಮಗೆ ಹೇಗೆ ಪ್ರದಾನ ಮಾಡಿರುವನೆಂಬುದು ಆಗ ತಿಳಿಯಬಹುದು. ಒಂದನೆಯದಾಗಿ ಕೇವಲ ನಮಾಝ್‌ನ ಪ್ರಯೋಜನವೇನೂ ಕಡಿಮೆಯಿರಲಿಲ್ಲ. ಅದರೊಂದಿಗೆ ಅದನ್ನು ಸಾಮೂಹಿಕವಾಗಿ ಮಾಡಬೇಕೆಂದು ವಿಧಿಸಿ ಅದರ ಪ್ರಯೋಜನವನ್ನು ಇಮ್ಮಡಿಗೊಳಿಸಲಾಗಿದೆ ಮತ್ತು ಅದರಲ್ಲಿ ಮಾನವನನ್ನು ಸಂಪೂರ್ಣ ಪರಿವರ್ತಿಸ ಬಲ್ಲಂತಹ ವಿಶಿಷ್ಟ ಶಕ್ತಿ ಸಾಮರ್ಥ್ಯಗಳನ್ನು ಇರಿಸಲಾಗಿದೆ.

## ನಮಾಝ್ ಯಾವೆಲ್ಲ ಗುಣವಿಶೇಷತೆಗಳನ್ನು ಬೆಳೆಸುತ್ತದೆ?

ಜೀವನದ ಪ್ರತಿಕ್ಷಣದಲ್ಲೂ ತನ್ನನ್ನು ದೇವನ ದಾಸನೆಂದು ತಿಳಿಯುವುದು, ಅತ್ಯಂತ ವಿಧೇಯ ದಾಸನಂತೆ ಒಡೆಯನಿಗೆ ಅಧೀನನಾಗಿರುವುದು ಮತ್ತು ಅವನ ಆಜ್ಞಾಪಾಲನೆಗೆ ಸದಾ ಸಿದ್ಧನಾಗಿರುವುದು–ಇದುವೇ ನಿಜವಾದ 'ಇಬಾದತ್' ಆಗಿದೆ ಎಂದೂ ನಮಾಝ್ ಮಾನವನನ್ನು ಈ ಇಬಾದತ್‌ಗಾಗಿಯೇ ಸಿದ್ಧಗೊಳಿಸುತ್ತದೆ ಎಂದೂ ಮೊದಲೇ ಹೇಳಿದ್ದೆ. ಈ ಇಬಾದತ್ ನಿರ್ವಹಣೆಗೆ ಮಾನವನಲ್ಲಿರಬೇಕಾದ ಗುಣ ವೈಶಿಷ್ಟ್ಯಗಳನ್ನು ಅದು ಉಂಟು ಮಾಡುತ್ತದೆಂದೂ ಹೇಳಿದ್ದೆ. ದಾಸ್ಯ ಪ್ರಜ್ಞೆಯ ಜೊತೆಗೆ ಅಲ್ಲಾಹ್, ಅವನ ಪ್ರವಾದಿ ಮತ್ತು ಅವನ ಗ್ರಂಥಗಳ ಮೇಲೆ ಈಮಾನ್ (ವಿಶ್ವಾಸ), ಪರಲೋಕದ ಮೇಲೆ ದೃಢನಂಬಿಕೆ, ದೇವಭಯ, ಅವನನ್ನು

ಪರೋಕ್ಷಜ್ಞಾನಿ ಮತ್ತು ಸದಾ ನಮ್ಮ ಹತ್ತಿರವಿದ್ದಾನೆಂದು ಭಾವಿಸುವುದು. ದೇವಾಜ್ಞೆಗಳ ಅರಿವು ಇತ್ಯಾದಿ ಮಾನವನನ್ನು ನೈಜ ದೇವದಾಸನನ್ನಾಗಿ ಮಾಡಲು ಅತ್ಯವಶ್ಯಕವಾಗಿ ಬೇಕಾದ ಗುಣವಿಶೇಷಗಳನ್ನೆಲ್ಲಾ ನಮಾಝ್ ಅವನಲ್ಲಿ ಉಂಟುಮಾಡುತ್ತದೆ.

ಆದರೆ ನೀವು ಚೆನ್ನಾಗಿ ಯೋಚಿಸಿದಾಗ, ಮಾನವನು ತಾನೆಷ್ಟು ಪರಿಪೂರ್ಣ ನೆನಿಸಿದರೂ ಇತರರು ಅವನೊಂದಿಗೆ ಸಹಕರಿಸದಿದ್ದರೆ ಅವನಿಗೆ ದೇವಾರಾಧನೆಯ ಪೂರ್ಣ ಋಣವನ್ನು ತೀರಿಸಲಾಗದು ಎಂದು ತಿಳಿದು ಬರುವುದು. ರಾತ್ರಿ ಹಗಲು ಅವನ ಸಹವಾಸದಲ್ಲಿರುವ ಹಾಗೂ ಅವನೊಂದಿಗೆ ವ್ಯವಹಾರ ನಡೆಸುತ್ತಿರುವ ಅನೇಕ ಜನರು ದೇವಾನುಸರಣಾ ಕಾರ್ಯದಲ್ಲಿ ಸಹಕರಿಸದೆ ಹೋದರೆ, ಅವನೊಬ್ಬನಿಗೆ ಮಾತ್ರ ದೇವಾಜ್ಞೆಗಳನ್ನೆಲ್ಲಾ ಪಾಲಿಸಲಾಗದು. ಮಾನವನು ಒಬ್ಬಂಟಿಗನಾಗಿ ಸೃಷ್ಟಿಸಲ್ಪಟ್ಟ ವನಲ್ಲ. ಅವನಿಗೆ ಒಬ್ಬಂಟಿಗನಾಗಿ ಕೆಲಸ ಮಾಡಲೂ ಸಾಧ್ಯವಿಲ್ಲ. ಅವನ ಇಡೀ ಜೀವನವು ತನ್ನ ಬಂಧು ಬಳಗ, ಮಿತ್ರರು, ನೆರೆಹೊರೆಯವರು ಮತ್ತಿತರ ಜನ ರೊಂದಿಗೆ ಅಸಂಖ್ಯಾತ ವ್ಯಾವಹಾರಿಕ ಸಂಬಂಧಗಳಿಂದ ಬಿಗಿಯಲ್ಪಟ್ಟಿದೆ. ಅಲ್ಲಾಹನ ಆಜ್ಞೆಗಳು ಈ ಎಲ್ಲಾ ಸಂಬಂಧಗಳ ದುರಸ್ತಿಗಾಗಿರುವುದೇ ವಿನಾ ಬರೇ ಒಬ್ಬ ವ್ಯಕ್ತಿಗಾಗಿ ಅಲ್ಲ. ಇವರೆಲ್ಲರೂ ಅಲ್ಲಾಹನ ಆಜ್ಞಾಪಾಲನೆಯಲ್ಲಿ ಪರಸ್ಪರ ಸಹಾಯ ಸಹಕಾರಗಳನ್ನು ನೀಡಿದರೆ, ಎಲ್ಲರೂ ಆಜ್ಞಾಪಾಲಕರಾಗಬಹುದು. ಆದರೆ ಅವರು ಆಜ್ಞೋಲ್ಲಂಘನೆ ಮಾಡಲುದ್ಯುಕ್ತರಾದರೆ ಅಥವಾ ಅವರ ಸಂಬಂಧಗಳು ಅಲ್ಲಾಹನ ಆದೇಶಗಳಿಗನುಸಾರ ಪರಸ್ಪರ ಸಹಕರಿಸದಂತಿದ್ದರೆ, ಕೇವಲ ಒಬ್ಬ ವ್ಯಕ್ತಿಗೆ ಅವನ ಜೀವಮಾನವಿಡೀ ಅಲ್ಲಾಹನ ಆಜ್ಞಾವಿಧಿಗಳಂತೆ ಸರಿಯಾಗಿ ನಡೆಯಲು ಸಾಧ್ಯವಾಗದು.

## ಒಬ್ಬಂಟಿಗನಾಗಿ ಶೈತಾನನ ವಿರುದ್ಧ ಹೋರಾಡುವುದೂ ಅಸಾಧ್ಯ

ಇದರೊಂದಿಗೆ ನೀವು ಕುರ್‌ಆನನ್ನು ಚೆನ್ನಾಗಿ ಲಕ್ಷ್ಯವಿರಿಸಿ ಪಠಿಸಿದರೆ, ನೀವು ಮಾತ್ರ ಅಲ್ಲಾಹನ ಆಜ್ಞಾಪಾಲಕ ದಾಸರಾಗಿದ್ದರೆ ಸಾಲದು; ಇತರರನ್ನು ಅಲ್ಲಾಹನ ಆಜ್ಞಾಪಾಲಕರನ್ನಾಗಿ ಮಾಡಬೇಕೆಂಬ ವಿಧಿಯೂ ಅದರಲ್ಲಿರುವುದನ್ನು ಕಾಣುವಿರಿ. ಆ ಪ್ರಕಾರ ನೀವು ಅಲ್ಲಾಹನ ಕಾನೂನನ್ನು ಜಗತ್ತಿನಾದ್ಯಂತ ಪ್ರಚಾರಮಾಡಿ ಜಾರಿ ಗೊಳಿಸಬೇಕು ಮತ್ತು ಶೈತಾನನ ವಿಧಿ ನಿಯಮಗಳು ಎಲ್ಲೆಲ್ಲಾ ಜಾರಿಯಲ್ಲಿವೆಯೋ ಅಲ್ಲಿಂದ ಅವುಗಳನ್ನು ನಿರ್ಮೂಲನಗೊಳಿಸಿ ಅವುಗಳ ಸ್ಥಾನದಲ್ಲಿ ಅಲ್ಲಾಹನ ವಿಧಿ ನಿಯಮಗಳ ಅಧಿಕಾರವನ್ನು ಸ್ಥಾಪಿಸಬೇಕೆಂದು ತಿಳಿಯುವಿರಿ. ನಿಮ್ಮ ಮೇಲೆ ಅಲ್ಲಾಹನು ವಿಧಿಸಿರುವ ಈ ಮಹತ್ತಾದ ಸೇವೆಯನ್ನು ಕೇವಲ ಒಬ್ಬ ಮುಸ್ಲಿಮನು ನೆರವೇರಿಸಲಾರನು. ಕೋಟ್ಯಂತರ ಮುಸ್ಲಿಮರು ಸಂಘಟಿತರಾಗಿ ಪರಸ್ಪರ ಸಹಾಯ ಸಹಕಾರಗಳಿಂದ ಆ ಉದ್ದೇಶಕ್ಕಾಗಿ ಹೋರಾಡಬೇಕಾದುದು ಅಗತ್ಯ.

ಇನ್ನಷ್ಟು ಆಳವಾಗಿ ಅವಲೋಕಿಸಿದಾಗ, ಇಷ್ಟೊಂದು ಮಹೋನ್ನತ ಉದ್ದೇಶ ಸಾಧನೆಗಾಗಿ ಮುಸ್ಲಿಮರು ಒಟ್ಟಾದರೆ ಮಾತ್ರ ಸಾಲದು. ಅವರ ಈ ಒಗ್ಗೂಡುವಿಕೆಯು ನೈಜ ಬುನಾದಿಯಲ್ಲಿರಬೇಕೆಂದೂ ನಿಮಗೆ ವಿಶದವಾಗುವುದು. ಅರ್ಥಾತ್ ಮುಸ್ಲಿಮರ ಸಂಘಟನೆಯಲ್ಲಿ ಪರಸ್ಪರ ಸಂಬಂಧಗಳು ದೋಷ ರಹಿತವಾಗಿರಬೇಕು. ಅವರಲ್ಲಿ ಪರಿಪೂರ್ಣ ಐಕ್ಯ ಇರಬೇಕು. ಅವರು ಒಬ್ಬ ನಾಯಕನನ್ನು ಅನುಸರಿಸಬೇಕು. ಅವನ ಅಪ್ಪಣೆ(Command)ಯಂತೆ ಚಲಿಸುವ ಅಭ್ಯಾಸ ಅವರಲ್ಲುಂಟಾಗಬೇಕು. ನಾಯಕನ ಅಪ್ಪಣೆಯನ್ನು ಹೇಗೆ ಪಾಲಿಸಬೇಕು, ಎಲ್ಲಿಯ ವರೆಗೆ ಪಾಲಿಸಬೇಕು, ಆಜ್ಞೋಲ್ಲಂಘನೆ ಮಾಡಬಹುದಾದ ಸಂದರ್ಭ ಯಾವುದು ಎಂಬುದನ್ನು ಅವರು ತಿಳಿದಿರಬೇಕು.

## ಸಂಘಟಿತ ನಮಾಝ್‌ನ ಪ್ರಯೋಜನಗಳು

ಈ ಎಲ್ಲಾ ವಿಷಯಗಳನ್ನು ಮುಂದಿಟ್ಟುಕೊಂಡು ಸಾಮೂಹಿಕ ನಮಾಝ್ ಇದನ್ನೆಲ್ಲಾ ಹೇಗೆ ಮಾಡುತ್ತದೆಂಬುದನ್ನು ನೋಡಿರಿ–

## ಒಂದೇ ಕರೆಗೆ ಒಟ್ಟುಗೂಡುವುದು

ಅದಾನ್ ಕೇಳಿದೊಡನೆ ತಂತಮ್ಮ ಕೆಲಸ ಕಾರ್ಯಗಳನ್ನೆಲ್ಲಾ ಬಿಟ್ಟು ಮಸೀದಿಗೆ ಬರಬೇಕೆಂಬ ಆದೇಶವಿದೆ. ಈ ಕರೆಯನ್ನು ಕೇಳಿ ಎಲ್ಲಾ ದಿಕ್ಕುಗಳಿಂದಲೂ ಮುಸ್ಲಿಮರು ಒಂದು ಕೇಂದ್ರ ಸ್ಥಾನದಲ್ಲಿ ಬಂದು ಸೇರುವಾಗ ಸೈನಿಕರಲ್ಲುಂಟಾಗು ವಂತಹ ಮಾನಸಿಕ ಸ್ಥಿತಿಯೇ ಅವರಲ್ಲುಂಟಾಗುತ್ತದೆ. ಕಹಳೆಯ ನಾದ ಕೇಳಿದೊಡನೆ ಸೈನಿಕರು ಎಲ್ಲಿದ್ದರೂ ನಮ್ಮ ದಂಡನಾಯಕನು ನಮ್ಮನ್ನು ಕರೆಯುತ್ತಿದ್ದಾನೆಂದು ತಿಳಿಯುತ್ತಾರೆ. ಈ ಕರೆಯಿಂದ ಎಲ್ಲರ ಹೃದಯದಲ್ಲೂ ಒಂದೇ ರೀತಿಯ ಭಾವನೆಯುಂಟಾಗುತ್ತದೆ. ಅರ್ಥಾತ್ ದಂಡನಾಯಕನ ಆಜ್ಞೆಯನ್ನು ಪಾಲಿಸುವ ಭಾವನೆ. ಈ ಭಾವನೆಗನುಸಾರ ಎಲ್ಲರೂ ಒಂದೇ ಕೆಲಸವನ್ನು ಮಾಡುತ್ತಾರೆ. ಅಂದರೆ– ಆ ಧ್ವನಿ ಕೇಳಿ ಎಲ್ಲಾ ದಿಕ್ಕುಗಳಿಂದಲೂ ಧಾವಿಸಿ ಬಂದು ಒಂದೆಡೆ ಸೇರುತ್ತಾರೆ. ಸೈನ್ಯದಲ್ಲಿ ಈ ಕ್ರಮವನ್ನು ಯಾಕೆ ಇಡಲಾಗಿದೆ?

ಏಕೆಂದರೆ ಪ್ರತಿಯೊಬ್ಬ ಸೈನಿಕನಿಗೆ ಬೇರೆಬೇರೆಯಾಗಿ ಆಜ್ಞೆಯನ್ನು ಕೇಳುವ ಮತ್ತು ಅನುಸರಿಸುವ ಅಭ್ಯಾಸ ವಾಗಬೇಕು. ಇಂತಹ ಎಲ್ಲಾ ವಿಧೇಯ ಸಿಪಾಯಿ ಗಳು ಒಟ್ಟು ಸೇರಿ ಒಂದು ದಳವಾಗಿ ದಂಡನಾಯಕನ ಆಜ್ಞೆಯ ಪ್ರಕಾರ ಏಕಕಾಲ ದಲ್ಲಿ ಒಂದೇ ಕಡೆ ಸೇರ ಬೇಕು ಮತ್ತು ಶತ್ರು ಸೈನಿಕರೊಂದಿಗೆ ಹೋರಾಡುವ ಸಂದರ್ಭ ಬಂದಾಗ ಇಡೀ ಸೈನ್ಯವು ಒಂದೇ ಕರೆಗೆ, ಒಂದೇ ಉದ್ದೇಶಕ್ಕಾಗಿ

ಒಟ್ಟಾಗಿ ಕಾರ್ಯವೆಸಗಲು ಸಾಧ್ಯವಾಗಬೇಕು. ಸಿಪಾಯಿಗಳೆಲ್ಲಾ ತಂತಮ್ಮ ಸ್ಥಾನದಲ್ಲಿ ಪರಾಕ್ರಮಿಗಳಾಗಿದ್ದರೂ ಹೋರಾಟಕ್ಕೆ ಕರೆ ಕೊಟ್ಟಾಗ ಬಂದು ಹೋರಾಡದೆ, ಪ್ರತಿಯೊಬ್ಬನೂ ತನಗಿಷ್ಟ ಬಂದಲ್ಲಿಗೆ ಸಾಗಿಬಿಡಬಾರದೆಂಬ ಉದ್ದೇಶದಿಂದಾಗಿರುತ್ತದೆ. ಒಂದು ಸೈನ್ಯದ ಅವಸ್ಥೆ ಇದಕ್ಕಿಂತ ವ್ಯತಿರಿಕ್ತವಾದರೆ ಅದರಲ್ಲಿ ಸಾವಿರಾರು ಸಿಪಾಯಿಗಳಿದ್ದರೂ ಶತ್ರು ಸೈನ್ಯದ ಸಣ್ಣ ಒಂದು ತುಕಡಿಯು ಒಬ್ಬೊಬ್ಬನನ್ನೇ ಹಿಡಿದು ಮುಗಿಸಿ ಬಿಡಬಲ್ಲುದು. ಇದೇ ಸಿದ್ಧಾಂತದ ಪ್ರಕಾರ ಎಲ್ಲಾ ಮುಸ್ಲಿಮರೂ ಒಟ್ಟು ಸೇರಿ ಒಂದು ಸೇನೆ ಯಂತಾಗಲು ಪ್ರತಿಯೊಬ್ಬ ಮುಸ್ಲಿಮನೂ ಅದಾನ್‌ನ ಧ್ವನಿ ಕೇಳಿದೊಡನೆ ಎಲ್ಲಾ ಕಾರ್ಯಕಲಾಪಗಳನ್ನು ಅಲ್ಲೇ ಬಿಟ್ಟು ಸಮೀಪದ ಮಸೀದಿಗೆ ತೆರಳಬೇಕೆಂಬ ನಿಯಮವನ್ನಿರಿಸಲಾಗಿದೆ. ಒಟ್ಟುಗೂಡುವ ಈ ಅಭ್ಯಾಸವನ್ನು ಅವರಿಗೆ ದಿನಕ್ಕೆ ಐದು ಸಲ ಮಾಡಿಸಲಾಗುತ್ತದೆ. ಏಕೆಂದರೆ ಜಗತ್ತಿನ ಇತರೆಲ್ಲಾ ಸೇನೆಗಳಿಗಿಂತ ಮಹತ್ತರವಾದ ಕರ್ತವ್ಯವನ್ನು ಈ ದೈವಿಕ ಸೇನೆಗೆ ನಿರ್ವಹಿಸಲಿಕ್ಕಿದೆ. ಇತರ ಸೇನೆಗಳಿಗೆ ಎಂದಾದರೊಮ್ಮೆ ಎಲ್ಲಾದರೊಂದು ಕಡೆ ಯುದ್ಧ ಮಾಡುವ ಸಂದರ್ಭ ಬರುತ್ತದಷ್ಟೆ. ಅದಕ್ಕಾಗಿ ಇಷ್ಟೆಲ್ಲಾ ಸೈನಿಕ ತರಬೇತಿ ಯನ್ನು ಮಾಡಿಸಲಾಗುತ್ತದೆ. ಆದರೆ ಈ ದೈವಿಕ ಸೇನೆಗೆ ಪ್ರತಿಕ್ಷಣದಲ್ಲೂ ಪೈಶಾಚಿಕ ಶಕ್ತಿಗಳೊಂದಿಗೆ ಹೋರಾಡಲಿಕ್ಕಿದೆ. ತನ್ನ ದಂಡನಾಯಕನ ಆಜ್ಞಾಪಾಲನೆಯನ್ನು ಸದಾ ಮಾಡುತ್ತಲೇ ಇರಬೇಕಾಗಿದೆ. ಹಾಗಿರುವಾಗ ದಿನಂಪ್ರತಿ ಕೇವಲ ಐದು ಬಾರಿ ಕಹಳೆ ಮೊಳಗಿದೊಡನೆ ಸೇನಾ ಠಾಣ್ಯದಲ್ಲಿ ಅರ್ಥಾತ್ ಮಸೀದಿಯಲ್ಲಿ ಒಟ್ಟು ಸೇರಬೇಕೆಂಬ ಆಜ್ಞೆ ನೀಡುವ ಮೂಲಕ ಅವರ ಮೇಲೆ ರಿಯಾಯಿತಿಯನ್ನೇ ತೋರಿಸಲಾಗಿದೆ.

## ಉದ್ದೇಶಪೂರ್ವಕ ಜಮಾವಣೆ

ಇದಿಷ್ಟು ಬರೇ ಅದಾನಿನ ಪ್ರಯೋಜನವಾಯಿತು. ನೀವೀಗ ಮಸೀದಿಯಲ್ಲಿ ಬಂದು ಸೇರುತ್ತೀರಿ. ಈ ಸಮ್ಮಿಲನದಲ್ಲಿಯೂ ಅನೇಕ ಪ್ರಯೋಜನಗಳಿವೆ. ಇಲ್ಲಿ ನೀವು ಒಟ್ಟು ಸೇರಿ ಒಬ್ಬರನ್ನೊಬ್ಬರು ಕಂಡು ಪರಿಚಯ ಮಾಡಿಕೊಳ್ಳುತ್ತೀರಿ. ಒಬ್ಬರನ್ನೊಬ್ಬರು ತಿಳಿದುಕೊಳ್ಳುತ್ತೀರಿ. ಹೀಗೆ ಕಾಣುವುದು, ಪರಿಚಯ ಮಾಡಿಕೊಳ್ಳುವುದು ಮತ್ತು ತಿಳಿದುಕೊಳ್ಳುವುದು ಯಾವ ನೆಲೆಯಲ್ಲಿ? ನೀವೆಲ್ಲರೂ ಏಕದೇವನ ದಾಸರು, ಒಂದೇ ಪ್ರವಾದಿಯ ಅನುಯಾಯಿಗಳು, ಒಂದೇ ಗ್ರಂಥವನ್ನು ಮಾನ್ಯ ಮಾಡುವವರು ಎಂಬ ನೆಲೆಯಲ್ಲಾಗಿರುತ್ತದೆ. ನಿಮ್ಮೆಲ್ಲರ ಜೀವನದ ಗುರಿ ಒಂದೇ. ಈ ಗುರಿಯನ್ನು ಸಾಧಿಸಲಿಕ್ಕಾಗಿಯೇ ನೀವೆಲ್ಲರೂ ಇಲ್ಲಿ ಸೇರಿದ್ದೀರಿ. ಇಲ್ಲಿಂದ ಹಿಂದಿರುಗಿ ಹೋಗಿಯೂ ಇದೇ ಗುರಿಯನ್ನು ಸಾಧಿಸಬೇಕಾಗಿದೆ. ಈ ತರದ ಪರಿಚಯ, ಇಂತಹ ತಿಳುವಳಿಕೆಗಳು ನಿಮ್ಮಲ್ಲಿ ಒಂದೇ ಕೂಟ, ಒಂದೇ ಗುಂಪು,

ಒಂದೇ ಪಂಗಡ, ಒಂದೇ ಸೈನ್ಯದ ಸಿಪಾಯಿಗಳು ಮತ್ತು ಪರಸ್ಪರ ಸಹೋದರರೆಂಬ ಸದ್ಭಾವನೆಯನ್ನುಂಟು ಮಾಡುತ್ತದೆ. ಇಹದಲ್ಲಿ ನಿಮ್ಮ ಧ್ಯೇಯೋದ್ದೇಶಗಳು, ಲಾಭ ನಷ್ಟಗಳು ಎಲ್ಲವೂ ಸಮಾನವಾಗಿದೆ. ನಿಮ್ಮೆಲ್ಲರ ಬಾಳುವೆಗಳು ಪರಸ್ಪರ ಹೆಣೆಯಲ್ಪಟ್ಟಿವೆ.

## ಪರಸ್ಪರ ಹಿತಚಿಂತನೆ

ನೀವು ಒಬ್ಬರನ್ನೊಬ್ಬರು ನೋಡುವಾಗ ಕಣ್ತೆರೆದೇ ನೋಡುತ್ತೀರಷ್ಟೇ. ಈ ನೋಟವೂ ಒಬ್ಬ ಶತ್ರು ಇನ್ನೊಬ್ಬ ಶತ್ರುವನ್ನು ನೋಡುವ ದೃಷ್ಟಿಯಿಂದಾಗಿರಲಿಕ್ಕಿಲ್ಲ. ಒಬ್ಬ ಮಿತ್ರನು ಇನ್ನೊಬ್ಬ ಮಿತ್ರನನ್ನು ಮತ್ತು ಒಬ್ಬ ಸಹೋದರನು ಇನ್ನೊಬ್ಬ ಸಹೋದರನನ್ನು ನೋಡಿದಂತಾಗಿರುವುದು. ಈ ದೃಷ್ಟಿಯಿಂದ ನೀವು ನೋಡುವಾಗ ಒಬ್ಬ ಸಹೋದರನು ಹರಕು ಬಟ್ಟೆಗಳೊಂದಿಗೆ, ಇನ್ನೊಬ್ಬನು ಖಿನ್ನ ವದನನಾಗಿ, ಮತ್ತೊಬ್ಬನು ಹಸಿದವನಾಗಿ ತೋರಬಹುದು. ಇವರೊಂದಿಗೆ ಅಂಗಹೀನರು, ಕುಂಟರು, ಮೂಕರು, ಹೆಳವರು ಮತ್ತು ಕುರುಡರೇ ಮೊದಲಾದ ಜನರನ್ನು ಕಂಡು ನಿಮ್ಮ ಹೃದಯದಲ್ಲಿ ಅವರ ಬಗ್ಗೆ ಸಹಾನುಭೂತಿಯುಂಟಾಗುವುದು. ನಿಮ್ಮಲ್ಲಿರುವ ಸ್ಥಿತಿವಂತರು ಬಡವರ ಮತ್ತು ನಿರ್ಗತಿಕರ ಮೇಲೆ ಕೃಪೆ ತೋರುವರು. ಬಡಜನರಿಗೂ ಧನಿಕರನ್ನು ಕಂಡಾಗ ತಮ್ಮ ಸ್ಥಿತಿಗತಿಗಳನ್ನು ಅವರ ಮುಂದಿಡಲು ಸಂಕೋಚವಾಗಲಾರದು. ಒಬ್ಬಾತನು ಅನಾರೋಗ್ಯದಲ್ಲಿ ಅಥವಾ ಬೇರಾವುದೋ ಗಂಡಾಂತರದಲ್ಲಿ ಸಿಲುಕಿದ ಕಾರಣ ಮಸೀದಿಗೆ ಬರಲಿಲ್ಲವೆಂಬ ಸುದ್ದಿ ಕೇಳಿದೊಡನೆ ಅವನ ದರ್ಶನಕ್ಕಾಗಿ ಹೋಗಬೇಕೆಂಬ ಯೋಚನೆ ನಿಮಗುಂಟಾಗುವುದು. ಯಾರಾದರೂ ಮರಣ ಹೊಂದಿದ ಸುದ್ದಿ ತಿಳಿದಾಗ ಎಲ್ಲರೂ ಒಟ್ಟಾಗಿ ಅವನ ಜನಾಝಾ (ಮರಣೋತ್ತರ) ನಮಾಝ್ ನೆರವೇರಿಸುವಿರಿ ಮತ್ತು ಅವನ ಬಂಧುಗಳ ಶೋಕದಲ್ಲಿ ಭಾಗಿಗಳಾಗುವಿರಿ. ಈ ವಿಷಯಗಳೆಲ್ಲ ಪರಸ್ಪರ ಪ್ರೇಮೋದ್ಭವ ಹಾಗೂ ಸಹಾಯ ಸಹಕಾರಗಳ ಸಾಧನಗಳಾಗಿವೆ.

## ಪವಿತ್ರ ಉದ್ದೇಶಕ್ಕಾಗಿ ಒಟ್ಟು ಸೇರುವುದು

ಇನ್ನಷ್ಟು ಗಮನಿಸಿದರೆ ನೀವೆಲ್ಲ ಇಲ್ಲಿ, ಒಂದು ಪವಿತ್ರ ಜಾಗದಲ್ಲಿ ಮತ್ತು ಪವಿತ್ರ ಉದ್ದೇಶಕ್ಕಾಗಿ ಒಟ್ಟು ಸೇರಿದ್ದೀರಿ. ಇದೇನೂ ಕಳ್ಳರ, ಕುಡುಕರ ಮತ್ತು ಜೂಜಾಡುವವರ ಸಮ್ಮೇಳನವಲ್ಲ. ಆದ್ದರಿಂದ ಇಲ್ಲಿ ಸೇರಿದವರ ಅಂತರಂಗಗಳು ಕೊಳಕಾಗಿರಲು ಸಾಧ್ಯವಿಲ್ಲ. ಇದು ಅಲ್ಲಾಹನ ದಾಸರ ಸಮ್ಮೇಳನ. ಎಲ್ಲರೂ ಅಲ್ಲಾಹನ ಆರಾಧನೆಗಾಗಿ ಮತ್ತು ದೇವಗೃಹದಲ್ಲಿ ದೇವನ ದಾಸ್ಯದ ಕರಾರು ಮಾಡಲಿಕ್ಕಾಗಿ ಬಂದಿರುತ್ತಾರೆ. ಇಂತಹ ಸಂದರ್ಭಗಳಲ್ಲಿ ಒಂದನೆಯದಾಗಿ ಓರ್ವ

ಸತ್ಯವಿಶ್ವಾಸಿಯಲ್ಲಿ ತನ್ನ ಪಾಪಗಳಿಗಾಗಿ ಪಶ್ಚಾತ್ತಾಪ ಪಡಬೇಕೆಂಬ ಭಾವನೆಯುಂಟಾಗುವುದು. ಆದರೆ ಆತನು ತನ್ನ ಬಂಧುವೋರ್ವನ ಮೇಲೆ ಏನಾದರೂ ಅತಿಕ್ರಮವೆಸಗಿದ್ದರೆ ಮತ್ತು ಆತನೂ ಮಸೀದಿಯಲ್ಲಿದ್ದರೆ, ಅತಿಕ್ರಮಿಗೆ ತನ್ನ ಮನಸ್ಸಿನೊಳಗೆ ಪಶ್ಚಾತ್ತಾಪ ಪಡಲು ಅವರಿಬ್ಬರ ಮುಖಾಮುಖಿಯೇ ಸಾಕಾಗಬಹುದು. ಮುಸ್ಲಿಮರಲ್ಲಿ ಪರಸ್ಪರ ಸದುಪದೇಶ ನೀಡುವ ಆಸಕ್ತಿ ಮತ್ತು ಅದರೊಂದಿಗೆ ಪ್ರೇಮ ಹಾಗೂ ಸಹಾನುಭೂತಿಯಿಂದ ಪರಸ್ಪರ ಸಂಸ್ಕರಿಸುವ ರೀತಿಯೂ ತಿಳಿದಿದ್ದರೆ, ಈ ಸಮ್ಮೇಳನವು ಇನ್ನಷ್ಟು ಫಲಪ್ರದವೂ ಮಂಗಲದಾಯಕವೂ ಆಗುವುದು ಎಂಬುದರಲ್ಲಿ ಸಂದೇಹವಿಲ್ಲ. ಹೀಗೆ ಎಲ್ಲಾ ಮುಸ್ಲಿಮರೂ ಒಟ್ಟಾಗಿ ಪರಸ್ಪರ ದೋಷಗಳನ್ನು ನಿವಾರಿಸಿಕೊಂಡರೆ, ಕುಂದುಕೊರತೆಗಳನ್ನು ನೀಗಿಸಿಕೊಂಡರೆ, ಕ್ರಮೇಣ ಇಡೀ ಸಮುದಾಯವೇ ಸಜ್ಜನರ ಮತ್ತು ಚಾರಿತ್ರ್ಯವಂತರ ಸಮುದಾಯವಾಗಿ ಮಾರ್ಪಡುವುದು.

## ಸಹೋದರತೆ

ಇವು ಕೇವಲ ಮಸೀದಿಯಲ್ಲಿ ಒಟ್ಟು ಸೇರುವುದರಿಂದಾಗುವ ಪ್ರಯೋಜನಗಳಾಗಿವೆ. ಇನ್ನು ಒಟ್ಟಾಗಿ ನಮಾಝ್ ಮಾಡುವುದರಲ್ಲಿ ಏನೆಲ್ಲ ಪ್ರಯೋಜನಗಳಿವೆಯೆಂಬುದನ್ನು ನೋಡಿರಿ. ನೀವೆಲ್ಲರೂ ಒಂದೇ ಸಾಲಿನಲ್ಲಿ ಒಬ್ಬರಿಗೊಬ್ಬರು ಸರಿಸಮಾನರಾಗಿ ನಿಲ್ಲುತ್ತೀರಿ. ನಿಮ್ಮಲ್ಲಿ ಉಚ್ಚ–ನೀಚ, ಮೇಲ್ಜಾತಿಯವ–ಕೀಳ್ಜಾತಿಯವ ಎಂಬ ಭೇದ ಭಾವವಿಲ್ಲ. ಅಲ್ಲಾಹನ ಆಸ್ಥಾನದಲ್ಲಿ ಎಲ್ಲರೂ ಒಂದೇ ಮಟ್ಟದವರು. ಒಬ್ಬನ ಮೈ ಇನ್ನೊಬ್ಬನಿಗೆ ತಗಲುವುದರಿಂದ ಮಲಿನವಾಗುವುದಿಲ್ಲ. ಎಲ್ಲರೂ ನಿರ್ಮಲರೇ. ಏಕೆಂದರೆ ಎಲ್ಲರೂ ಮನುಷ್ಯರು, ಏಕದೇವನ ದಾಸರು, ಒಂದೇ ಧರ್ಮದ ಅನುಯಾಯಿಗಳು. ನಿಮ್ಮೊಳಗೆ ಕುಲ, ಗೋತ್ರ, ದೇಶ, ಭಾಷೆಗಳ ಅಂತರವೂ ಇಲ್ಲ. ನಿಮ್ಮಲ್ಲಿ ಸೈಯದ್, ಪಠಾಣ, ರಜಪೂತ, ಜಾಟ ಮುಂತಾದವರಿರಬಹುದು. ಒಬ್ಬನು ಒಂದು ದೇಶದವನಾಗಿದ್ದರೆ, ಇನ್ನೊಬ್ಬನು ಇನ್ನೊಂದು ದೇಶದವನಾಗಿರಬಹುದು. ಒಬ್ಬನ ಭಾಷೆ ಒಂದಾದರೆ ಇನ್ನೊಬ್ಬನ ಭಾಷೆ ಬೇರೆಯಾಗಿರಬಹುದು. ಹೀಗಿದ್ದರೂ ನೀವು ಒಂದೇ ಸಾಲಿನಲ್ಲಿ ನಿಂತು ಆರಾಧಿಸುತ್ತೀರಿ. ಅಂದರೆ, ಎಲ್ಲರೂ ಒಂದೇ ಜನಾಂಗವಾಗಿದ್ದೀರಿ. ಈ ಕುಲ, ಗೋತ್ರ, ಜಾತಿ ಜನಾಂಗಗಳ ಭೇದಭಾವಗಳೆಲ್ಲವೂ ಮಿಥ್ಯ. ದೇವಾರಾಧನೆ ಮತ್ತು ದಾಸ್ಯದ ಸಂಬಂಧವೇ ನೈಜ ಹಾಗೂ ಅತಿ ಮಹತ್ವದ ಸಂಬಂಧವಾಗಿದೆ. ಈ ವಿಷಯದಲ್ಲಿ ನೀವೆಲ್ಲರೂ ಒಂದಾಗಿರುವಾಗ ಇತರ ವಿಷಯಗಳಲ್ಲಿ ಏಕೆ ಭಿನ್ನರಾಗಬೇಕು?

## ಚಲನೆಯಲ್ಲಿ ಏಕತೆ

ನೀವು ಭುಜಕ್ಕೆ ಭುಜ ತಾಗಿಸಿ ಸಾಲುಕಟ್ಟಿ ನಿಂತಿರುವಾಗ, ಒಂದು ಸೈನ್ಯವು

ತನ್ನ ಆಳರಸನ ಮುಂದೆ ಸೇವೆಗೆ ಸಜ್ಜಾಗಿ ನಿಂತಂತೆ ತೋರುತ್ತದೆ. ಸಾಲಾಗಿ ನಿಲ್ಲುವುದರಿಂದಲೂ ಒಟ್ಟಾಗಿ ಕ್ರಿಯಾಶೀಲರಾಗಿರುವುದರಿಂದಲೂ ನಿಮ್ಮಲ್ಲಿ ಐಕ್ಯ ಭಾವನೆಯುಂಟಾಗುತ್ತದೆ. ಈ ಮೂಲಕ, ದೇವರಾಧನೆಯ ಕಾರ್ಯದಲ್ಲಿ ಎಲ್ಲರ ಕೈಗಳೂ ಒಮ್ಮೆಲೆ ಮೇಲೇರಬೇಕು. ಎಲ್ಲರ ಕಾಲುಗಳು ಒಂದಾಗಿ ಚಲಿಸಬೇಕು ಎಂಬಂತೆ ಅಭ್ಯಾಸ ಮಾಡಿಸಲಾಗುತ್ತದೆ. ಆಗ ನೀವು ಹತ್ತಿಪ್ಪತ್ತಲ್ಲ, ನೂರಾರು ಅಥವಾ ಸಾವಿರಾರು ಸಂಖ್ಯೆಯಲ್ಲಿದ್ದರೂ ಒಂದೇ ಆಗಿರುವಂತೆ ತೋರುತ್ತದೆ.

## ಪ್ರಾರ್ಥನೆಗಳು

ಈ ಜಮಾಅತ್ (ಸಂಘಟನೆ) ಮಾಡಿ ಸಾಲುಕಟ್ಟಿ ನಿಂತ ಬಳಿಕ ನೀವು ಏನು ಮಾಡುತ್ತೀರಿ? ನಿಮ್ಮೊಡೆಯನೊಡನೆ ಒಕ್ಕೊರಳಿನಿಂದ **'ಇಯ್ಯಾಕ ನಅ್‌ಬುದು ವ ಇಯ್ಯಾಕ ನಸ್ತಈನ್'** (ನಾವೆಲ್ಲರೂ ನಿನ್ನನ್ನು ಮಾತ್ರ ಆರಾಧಿಸುತ್ತೇವೆ ಮತ್ತು ನಿನ್ನೊಡನೆ ಮಾತ್ರ ಸಹಾಯ ಯಾಚಿಸುತ್ತೇವೆ.) **''ಇಹ್ದಿನಸ್ಸಿರಾತಲ್ ಮುಸ್ತಕೀಮ್'** (ನಮ್ಮನ್ನು ನೇರ ಮಾರ್ಗದಲ್ಲಿ ನಡೆಸು.) **'ರಬ್ಬನಾಲಕಲ್ ಹಮ್ದ್'** (ಓ ನಮ್ಮ ಪ್ರಭೂ, ಎಲ್ಲಾ ಸ್ತೋತ್ರಗಳೂ ನಿನಗಾಗಿಯೇ ಇವೆ.) **ಅಸ್ಸಲಾಮು ಅಲೈನಾ ವಅಲಾ ಇಬಾದಿಲ್ಲಾಹಿಸ್ಸಾಲಿಹೀನ್** (ನಮ್ಮ ಮೇಲೂ ಎಲ್ಲಾ ಸಜ್ಜನ ದಾಸರ ಮೇಲೂ ಶಾಂತಿ ಇರಲಿ) ಎಂದು ಮುಂತಾಗಿ ಬಿನ್ನವಿಸಿಕೊಳ್ಳುತ್ತೀರಿ. ಅನಂತರ ನಮಾಝ್ ಮುಗಿಸಿ ನೀವು **'ಅಸ್ಸಲಾಮು ಅಲೈಕುಮ್ ವರಹ್‌ಮತುಲ್ಲಾಹ್'** ಎನ್ನುತ್ತಾ ಎಲ್ಲರಿಗಾಗಿ ಶಾಂತಿ ಹಾಗೂ ಅನುಗ್ರಹಗಳನ್ನು ಬೇಡುತ್ತೀರಿ. ಈ ರೀತಿ ನೀವೆಲ್ಲರೂ ಪರಸ್ಪರ ಹಿತ ಚಿಂತಕರು ಮತ್ತು ಎಲ್ಲರೂ ಒಟ್ಟಾಗಿ ಏಕೈಕನಾದ ಒಡೆಯನೊಡನೆ ಎಲ್ಲರ ಒಳಿತಿಗಾಗಿ ಪ್ರಾರ್ಥಿಸುವವರು ಎಂದು ತೋರಿಸುತ್ತೀರಿ. ನಿಮ್ಮ ಪೈಕಿ ಯಾರೂ ಎಲ್ಲವನ್ನೂ ತನಗಾಗಿ ಮಾತ್ರ ಬೇಡುವುದಿಲ್ಲ. ಎಲ್ಲರ ಮೇಲೆ ಅಲ್ಲಾಹನ ಅನುಗ್ರಹವಿರಲಿ, ಎಲ್ಲರಿಗೂ ಒಂದೇ ನೇರ ಮಾರ್ಗದಲ್ಲಿ ನಡೆಯುವ ತೌಫೀಕ್ (ಅನುಗ್ರಹ) ಒದಗಲಿ, ಎಲ್ಲರೂ ದೇವನ ರಕ್ಷಣೆಯಲ್ಲಿ ಸೇರಲಿ ಎಂದೇ ಪ್ರತಿಯೊಬ್ಬನೂ ಪ್ರಾರ್ಥಿಸುತ್ತಾನೆ. ಹೀಗೆ ಈ ನಮಾಝ್ ನಿಮ್ಮ ಹೃದಯಗಳನ್ನು ಜೋಡಿಸುತ್ತದೆ. ನಿಮ್ಮ ಭಾವನೆಗಳಲ್ಲಿ ಏಕತೆಯನ್ನುಂಟು ಮಾಡುತ್ತದೆ ಮತ್ತು ಹಿತಚಿಂತನೆಯ ಸಂಬಂಧವನ್ನು ಮೂಡಿಸುತ್ತದೆ.

## ನಾಯಕನಿಲ್ಲದೆ ಸಾಮೂಹತೆಯಿಲ್ಲ

ನೀವೆಂದೂ ಸಾಮೂಹಿಕ ನಮಾಝನ್ನು ಇಮಾಮ್ (ನಾಯಕ) ಇಲ್ಲದೆ ಮಾಡುವುದಿಲ್ಲ. ಇಬ್ಬರೇ ಇದ್ದರೂ ನಮಾಝ್ ಮಾಡುವಾಗ ಒಬ್ಬನು ಇಮಾಮನಾಗುವನು, ಇನ್ನೊಬ್ಬನು ಮುಕ್ತದೀ (ಅನುಗತ). ಜಮಾಅತ್ (ಸಾಮೂಹಿಕ

ನಮಾಝ್) ನಡೆಯುತ್ತಿರುವಾಗ ಪ್ರತ್ಯೇಕವಾಗಿ ನಮಾಝ್ ಮಾಡುವುದು ನಿಷಿದ್ಧ. ಅಂತಹ ನಮಾಝ್ ಸಿಂಧುವೇ ಅಲ್ಲ. ನಮಾಝ್‌ಗೆ ಬಂದವರೆಲ್ಲಾ ಅದೇ ಇಮಾಮರ ಹಿಂದೆ ಜಮಾಅತಿನಲ್ಲಿ ಸೇರಬೇಕು. ಈ ನಿಯಮವು ನಮಾಝ್ ಮಾಡುವವರಿಗಾಗಿ ಮಾತ್ರ ಇರುವುದಲ್ಲ. ಮುಸ್ಲಿಮರಾಗಿ ಬಾಳಬೇಕೆಂದು ಬಯಸುವಿರಾದರೆ ಈ ರೀತಿ ಜಮಾಅತ್ (ಸಂಘಟಿತ) ಆಗಿರಿ ಎಂಬ ಪಾಠವೂ ಇದರಲ್ಲಿದೆ. ಇಮಾಮ್ (ನಾಯಕ) ಇಲ್ಲದೆ ಹೋದಲ್ಲಿ ನಿಮ್ಮ ಜಮಾಅತೇ ಆಗದು. ಜಮಾಅತ್ ರೂಪುಗೊಂಡ ಬಳಿಕ ನೀವು ಹೊರಗಿರುವುದೆಂದರೆ ನಿಮ್ಮ ಜೀವನವು ಒಬ್ಬ ಮುಸ್ಲಿಮನ ಜೀವನವಾಗಿಲ್ಲ ಎಂದಾಗುವುದು.

## ನಾಯಕತ್ವದ ರೂಪಗಳು ಮತ್ತು ವಾಸ್ತವಿಕತೆ

ಇದು ಇಷ್ಟಕ್ಕೇ ಮುಗಿಯುವುದಿಲ್ಲ. ಇಮಾಮ್ ಮತ್ತು ಮುಕ್ತದೀಗಳ ನಡುವೆಯೂ ಕೆಲವು ಸಂಬಂಧಗಳನ್ನು ಸ್ಥಾಪಿಸಲಾಗಿದೆ. ಈ ಚಿಕ್ಕ ಮಸೀದಿಯ ಹೊರಗಿರುವ ಭೂಮಿಯೆಂಬ ವಿಶಾಲವಾದ ಮಸೀದಿಯಲ್ಲಿ ನಿಮ್ಮ ಇಮಾಮನ (ನಾಯಕನ) ನೆಲೆ ಏನು, ಅವನ ಕರ್ತವ್ಯಗಳೇನು, ಅವನ ಬಾಧ್ಯತೆಗಳೇನು, ನೀವು ಅವನನ್ನು ಹೇಗೆ ಮತ್ತು ಯಾವ ವಿಷಯಗಳಲ್ಲಿ ಅನುಸರಿಸಬೇಕು, ಅವನ ಆಜ್ಞೋಲ್ಲಂಘನೆ ಮಾಡಬೇಕಾದ ಸಂದರ್ಭಗಳಾವುವು, ಅವನು ತಪ್ಪು ಮಾಡಿದರೆ ಏನು ಮಾಡಬೇಕು, ತಪ್ಪು ಮಾಡಿದರೂ ನೀವು ಎಷ್ಟರ ವರೆಗೆ ಅವನನ್ನು ಅನುಸರಿಸ ಬೇಕು, ಅವನನ್ನು ಯಾವ ಸಂದರ್ಭಗಳಲ್ಲಿ ಎಚ್ಚರಿಸಬಹುದು, ಅವನ ತಪ್ಪನ್ನು ತಿದ್ದಿಕೊಳ್ಳಬೇಕೆಂದು ಅವನೊಡನೆ ಹೇಳಬೇಕಾದ ಸಂದರ್ಭಗಳಾವುವು, ಯಾವ ಸಂದರ್ಭದಲ್ಲಿ ಅವನನ್ನು ಇಮಾಮತ್‌ನಿಂದ (ನಾಯಕತ್ವ) ಉಚ್ಚಾಟಿಸಬಹುದು ಎಂಬಿತ್ಯಾದಿ ವಿಷಯಗಳ ಮೂಲಕ ಪ್ರತಿಯೊಂದು ಮಸೀದಿಯಲ್ಲಿ ದಿನಕ್ಕೆ ಐದಾವರ್ತಿ ಸಣ್ಣಮಟ್ಟದಲ್ಲಿ ಒಂದು ದೊಡ್ಡ ಸಾಮ್ರಾಜ್ಯವನ್ನೇ ನಡೆಸುವ ಅಭ್ಯಾಸ ಮಾಡಿಸಲಾಗುತ್ತದೆ.

## ನಾಯಕತ್ವದ ಶರತ್ತುಗಳು

**1. ದೇವಭಕ್ತಿ ಮತ್ತು ಧರ್ಮನಿಷ್ಠೆ:** ಇಲ್ಲಿ ಇವುಗಳ ಕೂಲಂಕಷ ವಿವರಣೆಯನ್ನು ನೀಡಲು ಅವಕಾಶವಿಲ್ಲ. ಆದರೂ ಕೆಲವು ವಿಷಯಗಳನ್ನು ಮಾತ್ರ ಸ್ಥೂಲವಾಗಿ ವಿವರಿಸುವೆನು. ಮುತ್ತಕೀ (ನಿಷ್ಠಾವಂತ), ಆದಷ್ಟು ಹೆಚ್ಚು ಧರ್ಮಜ್ಞಾನವುಳ್ಳ, ಕುರ್‌ಆನನ್ನು ಚೆನ್ನಾಗಿ ಬಲ್ಲ ಹಾಗೂ ಪ್ರಬುದ್ಧನಾದವನನ್ನೇ ಇಮಾಮ್ (ನಾಯಕ) ಆಗಿ ಮಾಡಬೇಕೆಂಬ ವಿಧಿ ಇದೆ. ಹದೀಸಿನಲ್ಲಿ ಈ ಪೈಕಿ ಯಾವ ಗುಣವಿಶೇಷವು ಯಾವುದಕ್ಕಿಂತ ಮೇಲಾಗಿರಬೇಕೆಂದು ಕ್ರಮಪ್ರಕಾರವಾಗಿ ತೋರಿಸಲಾಗಿದೆ. ರಾಷ್ಟ್ರದ

ನಾಯಕನನ್ನು ಆಯ್ಕೆ ಮಾಡುವಾಗ ಯಾವ ಯಾವ ವಿಷಯಗಳನ್ನು ಗಮನಿಸಬೇಕು ಎಂಬ ಶಿಕ್ಷಣವನ್ನು ಇಲ್ಲಿಂದಲೇ ಕೊಡಲಾಗಿದೆ.

**2. ಬಹುಸಂಖ್ಯಾತರ ಪ್ರತಿನಿಧಿ:** ಜಮಾಅತಿನ ಬಹುಸಂಖ್ಯಾತರು ಮೆಚ್ಚದಂತಹ ವ್ಯಕ್ತಿಯನ್ನು ಇಮಾಮ್ ಆಗಿ ನಿಶ್ಚಯಿಸಬಾರದೆಂಬ ವಿಧಿ ಇದೆ. ಕೆಲವರಾದರೂ ವಿರೋಧಿಗಳಿಲ್ಲದ ಯಾರಾದರೂ ಇದ್ದಾರೆಯೇ? ಆದರೆ ಒಂದು ಜಮಾಅತ್‌ನ ಅಧಿಕಾಂಶ ಜನರಿಂದ ತಿರಸ್ಕೃತವಾದವನನ್ನು 'ಇಮಾಮ್'ನ ಸ್ಥಾನಕ್ಕೆ ನಿಯುಕ್ತ ಗೊಳಿಸಬಾರದು. ಈ ನಿಯಮದಲ್ಲಿ ಪುನಃ ರಾಷ್ಟ್ರದ ನಾಯಕನ ಆಯ್ಕೆಯ ಒಂದು ವಿಧಾನವನ್ನು ತೋರಿಸಲಾಗಿದೆ.

**3. ಮುಕ್ತದೀ(ಅನುಯಾಯಿ)ಗಳ ಹಿತಚಿಂತಕ:** ಇಮಾಮ್ ಆಗಿ ನೇಮಿಸಲ್ಪಟ್ಟಾತನು ಜಮಾಅತ್‌ನಲ್ಲಿರುವ ಅತ್ಯಂತ ದುರ್ಬಲರಿಗೂ ತೊಂದರೆಯಾಗದ ರೀತಿಯಲ್ಲಿ ನಮಾಝ್ ನೆರವೇರಿಸಬೇಕೆಂಬ ನಿಯಮವಿದೆ. ತರುಣರನ್ನು, ಗಟ್ಟಿಮುಟ್ಟಾಗಿದ್ದವರನ್ನು ಆರೋಗ್ಯವಂತರನ್ನು ಮತ್ತು ಸಾಕಷ್ಟು ಬಿಡುವಿರುವವರನ್ನು ಮಾತ್ರ ಗಮನಿಸಿ ದೀರ್ಘ ಕಿರಾಅತ್ (ಕುರ್‌ಆನ್ ಪಠನ), ಉದ್ದುದ್ದ ರುಕೂಲ್ ಮತ್ತು ಸುಜೂದ್‌ಗಳನ್ನು ಮಾಡಬಾರದು. ಬದಲಾಗಿ ಜಮಾಅತಿನಲ್ಲಿರುವ ವೃದ್ಧರನ್ನು, ದುರ್ಬಲರನ್ನು, ರೋಗಿಗಳನ್ನು ಮತ್ತು ನಮಾಝ್ ಮುಗಿಸಿ ಬೇಗನೆ ತಂತಮ್ಮ ಕೆಲಸ ಕಾರ್ಯಗಳಿಗೆ ಹೋಗ ಬಯಸುವವರನ್ನು ಗಮನಿಸಬೇಕು. ಪ್ರವಾದಿವರ್ಯರು(ಸ) ನಮಾಝ್ ಮಾಡಿಸುತ್ತಿರುವಾಗ ಮಗು ಅಳುವ ಸ್ವರ ಕೇಳಿದೊಡನೆ ಅದರ ತಾಯಿ ಜಮಾಅತಿ ನಲ್ಲಿ ಸೇರಿದ್ದರೆ, ಆಕೆಗೆ ತೊಂದರೆ ಯಾಗಬಾರದೆಂದು ನಮಾಝನ್ನು ಸಂಕ್ಷಿಪ್ತಗೊಳಿಸುವ ಮೂಲಕ ಪ್ರೇಮಮಯ ಹಾಗೂ ದಾಕ್ಷಿಣ್ಯಮಯ ಮಾದರಿಯನ್ನು ಮುಂದಿರಿಸಿದ್ದಾರೆ. ಒಬ್ಬ ಜನನಾಯಕನಾಗಿ ಆಯ್ಕೆಗೊಂಡಾಗ ಅವನ ಕಾರ್ಯವಿಧಾನ ಹೇಗಿರಬೇಕು ಎಂಬುದನ್ನು ಇದು ತೋರಿಸುತ್ತದೆ.

**4. ಅಸಮರ್ಥನಾದರೆ ಸ್ಥಾನ ತೆರವುಗೊಳಿಸಬೇಕು:** ನಮಾಝ್ ಮಾಡಿಸುತ್ತಿರುವಾಗ ಇಮಾಮನಿಗೆ ತೊಂದರೆಯೇನಾದರೂ ಉಂಟಾಗಿ ಆತ ನಮಾಝ್ ನೆರವೇರಿಸುವ ಸ್ಥಿತಿಯಲ್ಲಿಲ್ಲದಿದ್ದರೆ, ಕೂಡಲೇ ತನ್ನ ಸ್ಥಾನದಿಂದ ಸರಿದು, ಆ ಸ್ಥಾನದಲ್ಲಿ ತನ್ನ ಹಿಂದೆ ನಿಂತಿರುವ ಒಬ್ಬನನ್ನು ನಿಲ್ಲಿಸಬೇಕೆಂಬ ನಿಯಮವಿದೆ. ರಾಷ್ಟ್ರನಾಯಕನ ಕರ್ತವ್ಯವೂ ಇದುವೇ ಆಗಿದೆಯೆಂದು ತಿಳಿಯುತ್ತದೆ. ತಾನು ನಾಯಕನಾಗಿರಲು ಅನರ್ಹನೆಂದು ಕಂಡುಕೊಂಡ ಮರುಕ್ಷಣದಲ್ಲೇ ತಾನಾಗಿ ತನ್ನ ಸ್ಥಾನವನ್ನು ತ್ಯಜಿಸಿ, ಯೋಗ್ಯನಾದ ಇನ್ನೊಬ್ಬನಿಗಾಗಿ ಸ್ಥಾನವನ್ನು ತೆರವುಗೊಳಿಸಬೇಕು.

ಈ ವಿಷಯದಲ್ಲಿ ಯಾವುದೇ ನಾಚಿಕೆಯಾಗಲೀ ಸ್ವಾರ್ಥವಾಗಲೀ ಇರಬಾರದು.

**5. ನಾಯಕನ ಸಂಪೂರ್ಣ ಅನುಸರಣೆ:** ಮುಕ್ತದೀಗಳು ಇಮಾಮನ ಚಲನೆಯನ್ನು ಕಟ್ಟುನಿಟ್ಟಾಗಿ ಅನುಸರಿಸಬೇಕೆಂಬ ನಿಯಮವಿದೆ. ಅವನ ಚಲನೆಗಿಂತ ಮುಂದಾಗಿ ಚಲಿಸುವುದನ್ನು ನಿಷೇಧಿಸಲಾಗಿದೆ. ಇಮಾಮರಿಗಿಂತ ಮುಂಚೆ ರುಕೂಅ್ ಅಥವಾ ಸುಜೂದ್ ಮಾಡುವವನು ಕತ್ತೆಯ ರೂಪದಲ್ಲಿ ಎಬ್ಬಿಸಲ್ಪಡುವನೆಂದು ಹದೀಸಿನಲ್ಲಿ ಬಂದಿದೆ. ಇಲ್ಲಿ ಜನಸಾಮಾನ್ಯರು ತಮ್ಮ ನಾಯಕನನ್ನು ಹೇಗೆ ಅನುಸರಿಸಬೇಕೆಂದು ಕಲಿಸಲಾಗುತ್ತಿದೆ.

**6. ತಪ್ಪಿದರೆ ಎಚ್ಚರಿಸುವುದು:** ಇಮಾಮನಿಂದ ತಪ್ಪುಗಳು ಸಂಭವಿಸಿ ಬಿಟ್ಟರೆ, (ಉದಾ: ಕುಳಿತುಕೊಳ್ಳಬೇಕಾದಲ್ಲಿ ನಿಂತುಬಿಟ್ಟರೆ ಅಥವಾ ನಿಲ್ಲಬೇಕಾದಲ್ಲಿ ಕುಳಿತು ಬಿಟ್ಟರೆ) ಕೂಡಲೇ 'ಸುಬ್ಹಾನಲ್ಲಾ' ಎಂದು ಹೇಳಿ ಅವನನ್ನು ಎಚ್ಚರಿಸಬೇಕೆಂಬ ನಿಯಮವಿದೆ. 'ಸುಬ್ಹಾನಲ್ಲಾ' ಎಂಬುದರ ಅರ್ಥ 'ಅಲ್ಲಾಹ್ ಪರಿಶುದ್ಧನು' ಎಂದಾಗಿದೆ. ಇಮಾಮನ ತಪ್ಪಿಗಾಗಿ 'ಸುಬ್ಹಾನಲ್ಲಾ' ಎಂದು ಹೇಳುವುದರ ಅರ್ಥ 'ದೋಷರಹಿತನಾದವನು ಅಲ್ಲಾಹನು ಮಾತ್ರ. ನೀವು ಮಾನವರಾಗಿದ್ದೀರಿ, ನಿಮ್ಮಿಂದ ತಪ್ಪುಗಳು ಸಂಭವಿಸುವುದರಲ್ಲಿ ಆಶ್ಚರ್ಯವಿಲ್ಲ' ಎಂದಾಗಿದೆ. ಇದು ಇಮಾಮನನ್ನು ಎಚ್ಚರಿಸುವ ಕ್ರಮ. ಹೀಗೆ ಎಚ್ಚರಿಕೆ ಕೊಟ್ಟಾಗ ಇಮಾಮನು ನಾಚಿಕೆ ಪಡದೆ ಅಥವಾ ಸಂಕೋಚ ಪಡದೆ ತನ್ನ ತಪ್ಪನ್ನು ತಿದ್ದಿಕೊಳ್ಳಬೇಕು. ಆದರೆ, ಎಚ್ಚರಿಕೆ ಸಿಕ್ಕಿದಾಗಲೂ ತನ್ನ ತಪ್ಪೇನೂ ಇಲ್ಲವೆಂದು ಇಮಾಮನಿಗೆ ಖಾತ್ರಿ ಇದ್ದರೆ, ತನ್ನ ಮನಸ್ಸಿನ ದೃಢತೆಯಂತೆ ಮುಂದು ವರಿಯಬಹುದು. ಇಂತಹ ಸಂದರ್ಭಗಳಲ್ಲಿ ಮುಕ್ತದೀಗಳು ಇಮಾಮನ ಈ ವರ್ತನೆಯು ತಪ್ಪೆಂದು ತಿಳಿದಾಗಲೂ ಅವನನ್ನು ಅನುಸರಿಸಬೇಕು. ನಮಾಝ್ ಮುಗಿದ ಬಳಿಕ ಇಮಾಮನಿಗೆ ಅವನ ತಪ್ಪನ್ನು ಮನವರಿಕೆ ಮಾಡಿ ನಮಾಝನ್ನು ಪುನರಾವರ್ತಿಸುವಂತೆ ಕೇಳಿಕೊಳ್ಳಬಹುದು.

**7. ಪಾಪಕಾರ್ಯದಲ್ಲಿ ಅನುಸರಣೆ:** ಇಮಾಮನೊಂದಿಗೆ ಜಮಾಅತಿನ ಈ ವ್ಯವಹಾರವು ಚಿಕ್ಕ ಪುಟ್ಟ ತಪ್ಪುಗಳಲ್ಲಿ ಮಾತ್ರ ಸರಿಯೆನಿಸುವುದು. ಇಮಾಮನು ಪ್ರವಾದಿಯವರ(ಸ) ಸುನ್ನತ್(ಚರ್ಯೆ)ಗೆ ವಿರುದ್ಧವಾಗಿ ನಮಾಝ್‌ನ ಕ್ರಮವನ್ನೇ ಬದಲಾಯಿಸಿ ಬಿಟ್ಟರೆ, ನಮಾಝ್‌ನಲ್ಲಿ ಬೇಕು ಬೇಕೆಂದೇ 'ಕುರ್‌ಆನ್' ತಪ್ಪಾಗಿ ಪಠಿಸಿದರೆ ಅಥವಾ ನಮಾಝ್ ಮಾಡುತ್ತಿರುವಾಗ ಕುಫ್ರ್, ಶಿರ್ಕ್ ಅಥವಾ ಸುಸ್ಪಷ್ಟವಾದ ಪಾಪ ಕಾರ್ಯಗಳನ್ನೆಸಗಿದರೆ ಮುಕ್ತದೀಗಳು ಆಗಲೇ ನಮಾಝನ್ನು ಮುರಿದು ಆ ಇಮಾಮನಿಂದ ಅಗಲುವುದು ಕಡ್ಡಾಯವಾಗಿದೆ. ಇವೆಲ್ಲಾ ನೀವು

ನಿಮ್ಮ ರಾಷ್ಟ್ರೀಯ ಜೀವನದಲ್ಲಿ ನಿಮ್ಮ ನಾಯಕನೊಂದಿಗೆ ಹೇಗೆ ವರ್ತಿಸಬೇಕೆಂಬುದನ್ನು ಕಲಿಸುವ ಮಾರ್ಗದರ್ಶನಗಳಾಗಿವೆ.

ಮುಸ್ಲಿಮ್ ಬಾಂಧವರೇ,

ನಾನು ವಿವರಿಸಿದ ಸಾಮೂಹಿಕ ನಮಾಝ್‌ನ ಪ್ರಯೋಜನಗಳಿಂದ, ಅಲ್ಲಾಹನು ದಿನಕ್ಕೆ ಐದಾವರ್ತಿ ಕೇವಲ ಕೆಲವೇ ನಿಮಿಷಗಳಲ್ಲಿ ಮಾಡಿ ಮುಗಿಸುವ ಈ ಒಂದು ಇಬಾದತ್‌ನಲ್ಲಿ ಉಭಯಲೋಕಗಳ ಸರ್ವ ವಿಧದ ಅನುಗ್ರಹಗಳನ್ನು ನಿಮಗಾಗಿ ಹೇಗೆ ಶೇಖರಿಸಿಟ್ಟಿರುವನು, ಕೇವಲ ಇದೊಂದು ವಸ್ತು (ನಮಾಝ್) ನಿಮಗೆ ಹೇಗೆ ಎಲ್ಲ ಒಳಿತುಗಳನ್ನು ನೀಡುತ್ತದೆ ಮತ್ತು ಇದು ನಿಮ್ಮನ್ನು ಅಲ್ಲಾಹನ ದಾಸ್ಯಕ್ಕೆ ಹಾಗೂ ಈ ಲೋಕದ ಆಧಿಪತ್ಯ ವಹಿಸಲು ಹೇಗೆ ಸಿದ್ಧಪಡಿಸುತ್ತದೆ ಎಂಬುದು ನಿಮಗೆ ಮನವರಿಕೆಯಾಗಿರಬಹುದು. ಈಗ ನೀವು, ನಮಾಝ್ ಇಷ್ಟೊಂದು ಮಹತ್ವದ ವಸ್ತುವಾಗಿದ್ದರೆ ಅದರ ಪ್ರಯೋಜನ ನಮಗೇಕೆ ಈಗ ಲಭ್ಯವಾಗುತ್ತಿಲ್ಲವೆಂದು ಖಂಡಿತ ಪ್ರಶ್ನಿಸುವಿರಿ. ಇದರ ಉತ್ತರವನ್ನು ಅಲ್ಲಾಹನಿಚ್ಛಿಸಿದರೆ ಮುಂದಿನ ಉಪನ್ಯಾಸದಲ್ಲಿ ಕೊಡುವೆನು.



# ನಮಾಝ್ ಸತ್ವಹೀನವಾದುದೇಕೆ?

ಮುಸ್ಲಿಮ್ ಬಾಂಧವರೇ,

ಹಿಂದಿನ ಅನೇಕ ಉಪನ್ಯಾಸಗಳಲ್ಲಿ ವಿವರಿಸಿದಂತೆ ನಮಾಝ್‌ನಲ್ಲಿ ಇಷ್ಟೆಲ್ಲಾ ಪ್ರಯೋಜನಗಳಿದ್ದರೂ ಅವೆಲ್ಲಾ ಈಗೇಕೆ ಲಭ್ಯವಾಗುತ್ತಿಲ್ಲ, ನೀವು ನಮಾಝ್ ಮಾಡುತ್ತೀರಿ. ಆದರೂ ನಿಮ್ಮ ಜೀವನದಲ್ಲಿ ಸುಧಾರಣೆಯಾಗುತ್ತಿಲ್ಲವೇಕೆ, ನಿಮ್ಮ ಚಾರಿತ್ರ್ಯ ಉತ್ತಮವಾಗುವುದಿಲ್ಲವೇಕೆ, ನೀವು ಪ್ರಬಲ ದೈವಿಕ ಸೇನೆಯಂತಾಗಿರುವುದಿಲ್ಲ ವೇಕೆ, ಸತ್ಯನಿಷೇಧಿಗಳು ನಿಮ್ಮ ಮೇಲೆ ಪ್ರಾಬಲ್ಯ ಹೊಂದಿರುವುದು ಹೇಗೆ, ನೀವು ಜಗತ್ತಿನಲ್ಲಿ ಮರ್ದಿತರೂ ಹತಭಾಗಿಗಳೂ ಆಗಿರಲು ಕಾರಣವೇನು ಎಂಬಿತ್ಯಾದಿಗಳನ್ನು ಇಂದಿನ ಉಪನ್ಯಾಸದಲ್ಲಿ ವಿವರಿಸುವೆನು.

ಈ ಪ್ರಶ್ನೆಗೆ ಸಂಕ್ಷೇಪವಾಗಿ ಉತ್ತರಿಸುವುದಿದ್ದರೆ, ನೀವು ನಮಾಝ್ ಮಾಡುವುದೇ ಇಲ್ಲ ಅಥವಾ ಮಾಡಿದರೂ ಅಲ್ಲಾಹ್ ಮತ್ತು ಪ್ರವಾದಿವರ್ಯರು(ಸ) ಕಲಿಸಿದ ರೀತಿಯಲ್ಲಿ ಮಾಡುವುದಿಲ್ಲ. ಆದುದರಿಂದ ನಿಮ್ಮ ನಮಾಝ್‌ನಿಂದ ಓರ್ವ ಸತ್ಯ ವಿಶ್ವಾಸಿಯನ್ನು ಅತ್ಯುನ್ನತ ಮಟ್ಟಕ್ಕೆ ಏರಿಸಬಲ್ಲಂತಹ ಪ್ರಯೋಜನಗಳನ್ನು ನಿರೀಕ್ಷಿಸು ವಂತಿಲ್ಲ. ಆದರೆ ಈ ಸಂಕ್ಷಿಪ್ತ ಉತ್ತರದಿಂದ ನಿಮಗೆ ಸಮಾಧಾನವಾಗಲಾರದೆಂಬುದನ್ನು ನಾನು ಬಲ್ಲೆ. ಆದುದರಿಂದ ಸ್ವಲ್ಪ ವಿವರವಾಗಿ ನಿಮಗೆ ಹೇಳುವೆನು.

## ಒಂದು ಉದಾಹರಣೆ: ಗಡಿಯಾರ

ನೀವೊಂದು ಗಡಿಯಾರವನ್ನು ತೆಗೆದು ನೋಡಿರಿ. ಅದರೊಳಗೆ ಅನೇಕ ಯಂತ್ರ ಭಾಗಗಳು ಜೋಡಿಸಲ್ಪಟ್ಟಿರುವುದನ್ನು ಕಾಣಬಹುದು. ಅದಕ್ಕೆ ಕೀಕೊಟ್ಟಾಗ ಆ ಎಲ್ಲಾ ಯಂತ್ರ ಭಾಗಗಳು ತಂತಮ್ಮ ಕೆಲಸ ಮಾಡಲಾರಂಭಿಸುತ್ತವೆ. ಅವುಗಳ ಚಲನೆಯೊಂದಿಗೆ ಗಡಿಯಾರದ ಹೊರಮುಖದಲ್ಲಿ ಅದರ ಪರಿಣಾಮ ಗೋಚರಿ ಸುತ್ತದೆ. ಅಂದರೆ ಗಡಿಯಾರದ ಎರಡೂ ಮುಳ್ಳುಗಳು ಚಲಿಸುತ್ತಾ ಒಂದೊಂದು ಸೆಕೆಂಡು ಮತ್ತು ಒಂದೊಂದು ನಿಮಿಷವನ್ನು ತೋರಿಸಲಾರಂಭಿಸುತ್ತವೆ. ಈಗ

ಸ್ವಲ್ಪ ಗಮನ ಹರಿಸಿರಿ. ಗಡಿಯಾರವನ್ನು ತಯಾರಿಸುವ ಉದ್ದೇಶವು ಸರಿಯಾದ ಸಮಯವನ್ನು ತೋರಿಸಲಿಕ್ಕಾಗಿದೆ. ಹಾಗಾಗಿಯೇ ಗಡಿಯಾರದಲ್ಲಿ ಸಮಯವನ್ನು ತೋರಿಸಲಿಕ್ಕೆ ಅಗತ್ಯವಾದ ಯಂತ್ರ ಭಾಗಗಳನ್ನು ಕ್ರಮಬದ್ಧವಾಗಿ ಜೋಡಿಸಲಾಗಿದೆ. ಅದರೊಂದಿಗೆ ಅವು ತಂತಮ್ಮ ಕೆಲಸವನ್ನು ನಿಲ್ಲಿಸಿ ಬಿಡದಂತೆ ಮತ್ತು ಸ್ವಲ್ಪ ಅವಧಿಯ ನಂತರ ಪುನಃ ಚಲಿಸುವಂತೆ ಮಾಡಲು ಕೀ ಕೊಡುವ ಕ್ರಮವನ್ನು ನಿಶ್ಚಯಿಸಲಾಗಿದೆ. ಹೀಗೆ ಎಲ್ಲಾ ಯಂತ್ರ ಭಾಗಗಳನ್ನು ಕ್ರಮಬದ್ಧವಾಗಿ ಜೋಡಿಸಿ, ಕೀ ಕೊಟ್ಟಾಗ ಈ ಗಡಿಯಾರವು ತನ್ನ ನಿರ್ಮಾಣದ ಉದ್ದೇಶವನ್ನು ನೆರವೇರಿಸಲು ಸಮರ್ಥವಾಯಿತು. ನೀವು ಕೀ ಕೊಡದಿದ್ದರೆ ಅದು ಸಮಯ ತೋರಿಸದು. ಕೀ ಕೊಟ್ಟರೂ ಸರಿಯಾದ ಕ್ರಮದಂತೆ ಕೊಡದಿದ್ದರೆ, ಅದು ನಿಂತು ಹೋಗುವುದು. ಒಂದು ವೇಳೆ ಚಲಿಸಿದರೂ ಸರಿಯಾದ ಸಮಯವನ್ನು ತೋರಿಸಲಾರದು. ನೀವು ಅದರ ಕೆಲವು ಯಂತ್ರ ಭಾಗಗಳನ್ನು ಕಳಚಿ, ಅನಂತರ ಕೀ ಕೊಟ್ಟರೆ ಅದರಿಂದೇನೂ ಫಲ ಸಿಗದು.

ನೀವು ಅದರ ಕೆಲವು ಯಂತ್ರ ಭಾಗಗಳನ್ನು ತೆಗೆದು ಅವುಗಳ ಸ್ಥಾನದಲ್ಲಿ ಹೊಲಿಗೆ ಯಂತ್ರದ ಬಿಡಿಭಾಗಗಳನ್ನು ಜೋಡಿಸಿ ಮತ್ತೆ ಕೀ ಕೊಟ್ಟರೆ ಅದು ಸಮಯವನ್ನು ತೋರಿಸಲಾರದು. ಮಾತ್ರವಲ್ಲ ಅದು ಬಟ್ಟೆಯನ್ನೂ ಹೊಲಿಯಲಾರದು. ಗಡಿಯಾರದ ಯಂತ್ರ ಭಾಗಗಳನ್ನೆಲ್ಲಾ ಬಿಡಿಸಿ, ಎಲ್ಲವನ್ನೂ ಅದರೊಳಗೇ ಇಟ್ಟು, ಕೀ ಕೊಟ್ಟರೂ ಅದರ ಯಾವ ಭಾಗವೂ ಕೆಲಸ ಮಾಡದು. ತೋರಿಕೆಗೆ ಗಡಿಯಾರದ ಎಲ್ಲಾ ಯಂತ್ರ ಭಾಗಗಳು ಅದರೊಳಗಿದ್ದರೂ ಅದರಿಂದ ಅದರ ನಿರ್ಮಾಣದ ಉದ್ದೇಶ ಪೂರ್ತಿಯಾಗದು. ಅವುಗಳು ಒಂದುಗೂಡಿ ಕೆಲಸ ಮಾಡಲು ಬೇಕಾದ ವ್ಯವಸ್ಥೆಯನ್ನೂ ಪರಸ್ಪರ ಸಂಪರ್ಕವನ್ನೂ ನೀವು ಮುರಿದು ಬಿಟ್ಟಿರುವುದರಿಂದ ಅವು ಒಟ್ಟಾಗಿ ಕೆಲಸ ಮಾಡಲಾರವು. ಇಂತಹ ಸ್ಥಿತಿಯಲ್ಲಿ ಗಡಿಯಾರದ ಅಸ್ತಿತ್ವ ಮತ್ತು ಕೀ ಕೊಡುವ ಕ್ರಿಯೆ ಎರಡೂ ವ್ಯರ್ಥ.

ಆದರೆ ದೂರದಿಂದ ನೋಡುವಾತನು ಅದನ್ನು ಗಡಿಯಾರವಲ್ಲವೆಂದಾಗಲಿ, ಅದಕ್ಕೆ ಕೀ ಕೊಡುವುದಿಲ್ಲವೆಂದಾಗಲಿ ಹೇಳಲಾರ. ಅದರ ರೂಪವೂ ಗಡಿಯಾರ ದಂತೆಯೇ ಇದ್ದು ಅದರಿಂದ ಪಡೆಯಬಹುದಾದ ಪ್ರಯೋಜನವನ್ನು ನೀವು ಪಡೆಯುತ್ತೀರೆಂದೇ ಆತ ಭಾವಿಸುವನು. ಹಾಗೆಯೇ ನೀವು ಕೀ ಕೊಡುವುದನ್ನು ದೂರದಿಂದ ನೋಡುವಾತನು ನಿಜವಾಗಿಯೂ ನೀವು ಕೀ ಕೊಡುತ್ತಿರುವಿರೆಂದೂ ಅದರ ಸೂಕ್ತ ಪರಿಣಾಮ ಪ್ರಕಟವಾಗಲೇ ಬೇಕೆಂದೂ ಪ್ರತೀಕ್ಷಿಸುವನು. ಆದರೆ ಅದು ಕೇವಲ ದೂರದಿಂದ ನೋಡಲಿಕ್ಕಿರುವ ಗಡಿಯಾರವಾಗಿದ್ದು ಯಥಾರ್ಥದಲ್ಲಿ

ಅದರಲ್ಲಿ ಗಡಿಯಾರದ ಗುಣವೇನೂ ಉಳಿದಿಲ್ಲದಿರುವಾಗ ಆತನ ನಿರೀಕ್ಷೆ ಸರಿಯಾಗುವುದು ಹೇಗೆ?

## ಮುಸ್ಲಿಮ್ ಸಮುದಾಯದ ಉದ್ದೇಶ

ಈ ಉದಾಹರಣೆಯಿಂದ ನೀವು ಸಂಪೂರ್ಣ ವಿಷಯವನ್ನು ಗ್ರಹಿಸಿಕೊಂಡಿರಬಹುದು. ಇಸ್ಲಾಮನ್ನು ಅದೇ ಗಡಿಯಾರದೊಂದಿಗೆ ಹೋಲಿಸಿ. ಸರಿಯಾದ ಸಮಯವನ್ನು ತೋರಿಸುವುದು ಗಡಿಯಾರದ ಉದ್ದೇಶವಾಗಿರುವಂತೆಯೇ ಇಸ್ಲಾಮಿನ ಉದ್ದೇಶವು ಭೂಮಿಯಲ್ಲಿ ದೇವನ ಪ್ರತಿನಿಧಿಗಳಾಗಿ, ಜನರಿಗೆ ದೇವನ ಸಾಕ್ಷಿಗಳಾಗಿ ಸ್ವತಃ ದೇವಾದೇಶಗಳಂತೆ ನಡೆಯುವುದು ಮತ್ತು ಇತರರನ್ನು ದೇವಾಜ್ಞೆಗಳಿಗೆ ವಿಧೇಯರನ್ನಾಗಿ ಮಾಡುವುದಾಗಿದೆ. ಈ ಉದ್ದೇಶವನ್ನು ಕುರ್‌ಆನಿನಲ್ಲಿ ಸುಸ್ಪಷ್ಟವಾಗಿ ವಿವರಿಸಲಾಗಿದೆ.

"ಮಾನವರ ಸನ್ಮಾರ್ಗದರ್ಶನ ಮತ್ತು ಸಂಸ್ಕಾರಗಳಿಗಾಗಿ ನಿಯೋಗಿಸಲಾಗಿರುವ ಅತ್ಯುತ್ತಮ ಜನಕೂಟವು ನಿಮ್ಮದಾಗಿರುತ್ತದೆ. ನೀವು ಒಳಿತಿನ ಆದೇಶವನ್ನೀಯುತ್ತೀರಿ, ಪಾಪ ಕಾರ್ಯಗಳಿಂದ ತಡೆಯುತ್ತೀರಿ ಮತ್ತು ಅಲ್ಲಾಹನ ಮೇಲೆ ವಿಶ್ವಾಸವಿಡುತ್ತೀರಿ." (ಪವಿತ್ರ ಕುರ್‌ಆನ್: 3: 110)

"ಮತ್ತು ಇದೇ ರೀತಿ ನೀವು ಜಗತ್ತಿನ ಮಾನವರ ಬಗ್ಗೆ ಸಾಕ್ಷಿಯಾಗಿರಲಿಕ್ಕೂ ಸಂದೇಶವಾಹಕರು ನಿಮ್ಮ ಬಗ್ಗೆ ಸಾಕ್ಷಿಯಾಗಿರಲಿಕ್ಕೂ ನಾವು ನಿಮ್ಮನ್ನು ಒಂದು ಸುಮಧ್ಯ ಸಮುದಾಯವನ್ನಾಗಿ ಮಾಡಿದ್ದೇವೆ." (ಪವಿತ್ರ ಕುರ್‌ಆನ್: 2: 143)

"ನಿಮ್ಮ ಪೈಕಿ ಸತ್ಯವಿಶ್ವಾಸವಿರಿಸಿ ಸತ್ಕರ್ಮವೆಸಗಿದವರೊಡನೆ, ಅಲ್ಲಾಹನು ಅವರಿಗಿಂತ ಮುಂಚಿನವರನ್ನು ಭೂಮಿಯಲ್ಲಿ ಪ್ರತಿನಿಧಿಗಳಾಗಿ ಮಾಡಿದಂತೆಯೇ ಅವರನ್ನು ಮಾಡುವನೆಂದು ವಾಗ್ದಾನ ಮಾಡಿರುವನು." (ಪವಿತ್ರ ಕುರ್‌ಆನ್: 24: 55)

"ಓ ಸತ್ಯವಿಶ್ವಾಸಿಗಳೇ, ಫಿತ್ನ (ಕ್ಷೋಭೆ) ಅಳಿದು ಹೋಗುವ ವರೆಗೂ 'ದೀನ್' (ಧರ್ಮ) ಸರ್ವ ಸಂಪೂರ್ಣವಾಗಿ ಅಲ್ಲಾಹನಿಗಾಗಿ ಆಗುವ ವರೆಗೂ ಈ ಸತ್ಯನಿಷೇಧಿಗಳೊಡನೆ ಹೋರಾಡಿರಿ." (ಪವಿತ್ರ ಕುರ್‌ಆನ್: 8: 31)

## ಇಸ್ಲಾಮಿನ ಆದೇಶಗಳು ಮತ್ತು ಗಡಿಯಾರದ ಬಿಡಿಭಾಗಗಳು

ಈ ಉದ್ದೇಶ ಸಾಧನೆಗಾಗಿ ಗಡಿಯಾರದ ಯಂತ್ರ ಭಾಗಗಳಂತೆಯೇ ಇಸ್ಲಾಮಿ ನಲ್ಲಿಯೂ ಅದರ ಉದ್ದೇಶ ಸಾಧನೆಗಾಗಿ ಅಗತ್ಯವಾದ ಮತ್ತು ತಕ್ಕುದಾದ ಬಿಡಿಭಾಗ ಗಳಿವೆ. ವಿಶ್ವಾಸ ಮತ್ತು ನೈತಿಕ ನಿಯಮಗಳು, ವ್ಯವಹಾರದ ನಿಬಂಧನೆಗಳು, ಅಲ್ಲಾಹನ ಹಕ್ಕುಗಳು, ಜನರ ಹಕ್ಕುಗಳು, ತನ್ನ ಸ್ವಂತ ಹಕ್ಕುಗಳು,

ನಿಮಗೆ ಸಂಬಂಧಿಸಿದ ಇತರ ಎಲ್ಲಾ ವಸ್ತುಗಳ ಹಕ್ಕುಗಳು, ಸಂಪಾದನೆಯ ವಿಧಾನ, ಖರ್ಚು ಮಾಡುವ ರೀತಿ, ಯುದ್ಧದ ನಿಯಮಗಳು, ಒಪ್ಪಂದದ ಕಾಯಿದೆ, ಆಡಳಿತ ನಿಯಮಗಳು ಹಾಗೂ ಇಸ್ಲಾಮೀ ರಾಷ್ಟ್ರವನ್ನು ಅನುಸರಿಸುವ ವಿಧಾನ– ಇವೆಲ್ಲಾ ಇಸ್ಲಾಮಿನ ಯಂತ್ರ ಭಾಗಗಳಾಗಿವೆ. ಅವುಗಳನ್ನೆಲ್ಲಾ ಗಡಿಯಾರದ ಯಂತ್ರ ಭಾಗ ಗಳಂತೆಯೇ ಪರಸ್ಪರ ಜೋಡಿಸಲಾಗಿದೆ. ಆ ಮೂಲಕ ಸರಿಯಾದ ಸಮಯ ತೋರಿಸಲು ಎಲ್ಲ ಯಂತ್ರ ಭಾಗಗಳೂ ಒಟ್ಟಾಗಿ ಚಲಿಸುವಂತೆ ಮತ್ತು ಪ್ರತಿಯೊಂದು ಯಂತ್ರ ಭಾಗವು ತನಗೆ ವಹಿಸಿಕೊಟ್ಟ ನಿಶ್ಚಿತ ಕೆಲಸವನ್ನು ಮಾಡುವಂತೆ ವ್ಯವಸ್ಥೆ ಮಾಡಲಾಗಿದೆ. ಅದಕ್ಕೆ ಕೀ ಕೊಟ್ಟೊಡನೆ ಪ್ರತಿ ಯೊಂದು ಭಾಗವೂ ಇನ್ನೊಂದರೊಂದಿಗೆ ಸೇರಿ ಚಲಿಸಲಾರಂಭಿಸುತ್ತದೆ. ಇವೆಲ್ಲವುಗಳ ಚಲನೆಯಿಂದ ಇಸ್ಲಾಮಿನ ಉತ್ಥಾನ ಮತ್ತು ಜಗತ್ತಿನಲ್ಲಿ ದೇವಾದೇಶಗಳ ಪ್ರಸಾರವೂ ಕೂಡ ಗಡಿಯಾರದ ಚಲನೆಯು ಅದರ ಹೊರ ಮುಖದಲ್ಲಿ ಗೋಚರಿಸುವಂತೆ ಸರಾಗವಾಗಿ ಅಭಿವ್ಯಕ್ತವಾಗುತ್ತದೆ.

ಗಡಿಯಾರದ ಯಂತ್ರ ಭಾಗಗಳನ್ನು ಪರಸ್ಪರ ಬಿಗಿಯಲು ಕೆಲವು ಮೊಳೆಗಳನ್ನೂ ಸ್ಕ್ರೂಗಳನ್ನೂ ಬಳಸಲಾಗುತ್ತದೆ. ಅದೇ ರೀತಿಯಲ್ಲಿ ಇಸ್ಲಾಮಿನ ಎಲ್ಲಾ ಯಂತ್ರದ ಭಾಗಗಳನ್ನು ಜೋಡಿಸಿ ಕ್ರಮ ಪಡಿಸಲಿಕ್ಕಾಗಿ ಸಂಘಟನಾ ವ್ಯವಸ್ಥೆಯನ್ನು ನಿಶ್ಚಯಿಸ ಲಾಗಿದೆ. ಅಂದರೆ ಮುಸ್ಲಿಮರಲ್ಲಿ ಧಾರ್ಮಿಕ ಜ್ಞಾನವುಳ್ಳ ಹಾಗೂ ನಿಷ್ಠಾವಂತನಾದ ನಾಯಕ ಇರಬೇಕು ಮತ್ತು ಜಮಾಅತ್ (ಸಮುದಾಯ) ವೈಚಾರಿಕವಾಗಿ ಅವನಿಗೆ ಸಹಕಾರ ನೀಡುವಂತಾಗಬೇಕು. ಜಮಾಅತ್‌ನ ಅವಯವಗಳು ಅವನನ್ನು ಅನುಸರಿಸು ವಂತಾಗ ಬೇಕು. ಇವರೆಲ್ಲರ ಬಲದಿಂದ ಅವನು ಇಸ್ಲಾಮಿನ ಶಾಸನಗಳನ್ನು ಜಾರಿ ಗೊಳಿಸುವಂತಾಗಬೇಕು. ಅವುಗಳ ಉಲ್ಲಂಘನೆಯಿಂದ ಜನರನ್ನು ತಡೆಯುವಂತಾಗ ಬೇಕು. ಹೀಗೆ ಎಲ್ಲಾ ಅಂಗಭಾಗಗಳು ಕ್ರಮಬದ್ಧವಾಗಿ ಒಂದುಗೂಡಿದಾಗ ಅವುಗಳಿಗೆ ಚಲನೆ ಕೊಡಲು ಮತ್ತು ಅದು ನಿರಂತರ ನಡೆಯಲು ಕೀ ಕೊಡಬೇಕಾಗುತ್ತದೆ. ಈ ಕೀ ಕೊಡುವ ಕ್ರಮವೇ ದಿನಕ್ಕೈದಾವರ್ತಿ ಮಾಡುವ ನಮಾಝ್. ಇನ್ನು ಆ ಗಡಿಯಾರ ವನ್ನು ಒರೆಸಿ ಶುಚಿಗೊಳಿಸಬೇಕಾಗುತ್ತದೆ. ಆ ನಿರ್ಮಲೀಕರಣವೇ ವರ್ಷಕ್ಕೊಮ್ಮೆ ಒಂದು ತಿಂಗಳ ತನಕ ಆಚರಿಸಲ್ಪಡುವ ಉಪವಾಸ ವ್ರತ. ಆ ಗಡಿಯಾರಕ್ಕೆ ಎಣ್ಣೆ ಬಿಡಬೇಕಾಗುತ್ತದೆ. ವರ್ಷಕ್ಕೊಮ್ಮೆ ಅದರ ಯಂತ್ರ ಭಾಗಗಳಿಗೆ ಬಿಡುವ ಎಣ್ಣೆಯೇ ಝಕಾತ್ (ಕಡ್ಡಾಯ ದಾನ). ಈ ಎಣ್ಣೆಯು ಹೊರಗಿನಿಂದ ಬರುವುದಿಲ್ಲ. ಅದೇ ಗಡಿಯಾರದ ಕೆಲವು ಯಂತ್ರ ಭಾಗಗಳು ಈ ಎಣ್ಣೆಯನ್ನು ತಯಾರಿಸಿ ಒಣ ಭಾಗಗಳಿಗೆ ಸವರಿ ಅವು ಸುಲಭವಾಗಿ ಚಲಿಸುವಂತೆ ಮಾಡುತ್ತವೆ. ಒಮ್ಮೊಮ್ಮೆ ಅದರ ಯಂತ್ರ ಭಾಗಗಳನ್ನೆಲ್ಲಾ ಬಿಚ್ಚಿ ಪುನಃ ಜೋಡಿಸಬೇಕಾಗುತ್ತದೆ.

ಈ ಪುನರ್ ಜೋಡಣೆಯು ಕನಿಷ್ಠ ಪಕ್ಷ ಜೀವಮಾನದಲ್ಲೊಮ್ಮೆ ಮಾಡಲೇ ಬೇಕಾದ ಹಜ್ಜ್ ಆಗಿದೆ. ಇದನ್ನು ಒಂದಕ್ಕಿಂತ ಹೆಚ್ಚು ಬಾರಿ ಮಾಡಿದರೂ ಒಳ್ಳೆಯದೇ.

## ವಿಭಿನ್ನ ಬಿಡಿ ಭಾಗಗಳನ್ನು ಜೋಡಿಸುವುದು ಹಿತಕರವಲ್ಲ

ಕೀ ಕೊಡುವ, ಶುಚಿಮಾಡುವ, ಎಣ್ಣೆಬಿಡುವ ಮತ್ತು ಬಿಚ್ಚಿ ಪುನಃ ಜೋಡಿಸುವ ಕಾರ್ಯಗಳೆಲ್ಲಾ ಫಲಕಾರಿಯಾಗಬೇಕಾದರೆ ಗಡಿಯಾರದ ಚೌಕಟ್ಟಿನೊಳಗೆ ಅದರದೇ ಆದ ಎಲ್ಲ ಯಂತ್ರಭಾಗಗಳು ಇರಬೇಕು. ಅವು ಅದರ ತಯಾರಕನು ಆರಂಭದಲ್ಲಿ ಜೋಡಿಸಿದ್ದ ಕ್ರಮದಲ್ಲೇ ಜೋಡಿಸಲ್ಪಟ್ಟಿದ್ದು, ಕೀ ಕೊಟ್ಟೊಡನೆ ಚಲಿಸಲಾರಂಭಿಸಿ ಅದರ ಪರಿಣಾಮವನ್ನು ತೋರಿಸತಕ್ಕ ಸ್ಥಿತಿಯಲ್ಲಿರಬೇಕು. ಆದರೆ ಇಲ್ಲಿನ ಪರಿಸ್ಥಿತಿ ಬೇರೆಯೇ ಆಗಿಬಿಟ್ಟಿದೆ. ಮೊದಲನೆಯದಾಗಿ, ಆ ಯಂತ್ರಭಾಗಗಳನ್ನು ಪರಸ್ಪರ ಜೋಡಿಸತಕ್ಕ ಜಮಾಅತ್ (ಸಂಘಟನಾ) ವ್ಯವಸ್ಥೆಯೇ ಇಲ್ಲವಾಗಿದೆ. ತತ್ಪರಿಣಾಮವಾಗಿ ಎಲ್ಲಾ ಸಂಪರ್ಕಗಳೂ ಸಡಿಲವಾಗಿ ಯಂತ್ರಭಾಗಗಳೆಲ್ಲಾ ಕಳಚಿ ಬಿದ್ದಿವೆ. ಈಗ ಪ್ರತಿಯೊಬ್ಬನೂ ತನ್ನಿಚ್ಛೆಯಂತೆ ವರ್ತಿಸುತ್ತಾನೆ. ಯಾರೂ ಅವನನ್ನು ಕೇಳುವವರಿಲ್ಲ. ಪ್ರತಿಯೊಬ್ಬನೂ ಸ್ವೇಚ್ಛಾಚಾರಿಯಾಗಿದ್ದಾನೆ. ಅವನಿಗೆ ಇಷ್ಟ ಬಂದರೆ ಇಸ್ಲಾಮನ್ನು ಅನುಸರಿಸುತ್ತಾನೆ, ಇಲ್ಲವಾದರೆ ಇಲ್ಲ. ಇಷ್ಟರಿಂದಲೂ ನಿಮಗೆ ತೃಪ್ತಿಯಾಗಲಿಲ್ಲ. ಆ ಯಂತ್ರದ ಅನೇಕ ಭಾಗಗಳನ್ನು ಅವುಗಳ ಸ್ಥಾನದಿಂದ ಕಿತ್ತು, ಆ ಸ್ಥಾನದಲ್ಲಿ ಪ್ರತಿಯೊಬ್ಬನೂ ತನಗಿಷ್ಟ ಬಂದ ಬೇರೆ ಯಂತ್ರಗಳ ಬಿಡಿಭಾಗಗಳನ್ನು ತಂದು ಜೋಡಿಸಿದನು. ಒಬ್ಬನು ಸಿಂಗರ್ ಮೆಶೀನ್‌ನ ಬಿಡಿಭಾಗಗಳನ್ನು ತಂದನು. ಇನ್ನೊಬ್ಬನಿಗೆ ಗ್ರೈಂಡರ್‌ನ ಬಿಡಿಭಾಗಗಳು ಯೋಗ್ಯವಾಗಿ ಕಂಡುದರಿಂದ ಅವುಗಳನ್ನು ತಂದನು. ಬೇರೊಬ್ಬನಿಗೆ ವಾಹನಗಳ ಬಿಡಿಭಾಗಗಳು ಇಷ್ಟವಾಗಿ ಕಂಡವು. ಹೀಗೆ ಒಬ್ಬೊಬ್ಬನು ಒಂದೊಂದನ್ನು ತಂದು ಆ ಗಡಿಯಾರದ ಯಂತ್ರಕ್ಕೆ ಜೋಡಿಸಿ ಬಿಟ್ಟನು. ಈಗ ನೀವು ಮುಸ್ಲಿಮರೆಂದು ವಾದಿ ಸುತ್ತೀರಿ. ಆದರೆ ಬ್ಯಾಂಕುಗಳಲ್ಲಿ ಬಡ್ಡಿಯ ವ್ಯವಹಾರಗಳನ್ನು ಮಾಡುತ್ತೀರಿ. ವಿಮಾ ಕಂಪೆನಿಗಳಲ್ಲಿ ಜೀವಕ್ಕೆ ವಿಮೆಗಳನ್ನು ಮಾಡಿಸಿಕೊಂಡಿದ್ದೀರಿ. ಧರ್ಮಬಾಹಿರವಾದ ನ್ಯಾಯಾಲಯಗಳಲ್ಲಿ ಸುಳ್ಳು ವ್ಯಾಜ್ಯಗಳನ್ನು ವ್ಯವಹರಿಸುತ್ತಿದ್ದೀರಿ. ಮಿಥ್ಯವಾದಿಗಳ ಸೇವೆಯನ್ನು ಪ್ರಾಮಾಣಿಕತೆಯಿಂದ ಮಾಡುತ್ತಿದ್ದೀರಿ. ಪುತ್ರಿಯರನ್ನು, ಸಹೋದರಿಯನ್ನು ಮತ್ತು ಪತ್ನಿಯರನ್ನು 'ಮೇಡಮ್'ಗಳನ್ನಾಗಿ ಪರಿವರ್ತಿಸಿ ಮೆರೆಸುತ್ತಲೂ ಇದ್ದೀರಿ. ಮಕ್ಕಳಿಗೆ ಭೌತಿಕ ಶಿಕ್ಷಣ ಕೊಡಲಾಗುತ್ತದೆ. ಗಾಂಧೀಜಿಯವರ ಅನು ಕರಣೆಯೂ ನಡೆಯುತ್ತಿದೆ, ಲೆನಿನ್‌ನ ಗುಣಗಾನವನ್ನೂ ಮಾಡಲಾಗುತ್ತದೆ. ಒಟ್ಟಿನಲ್ಲಿ ನಮ್ಮ ಮುಸ್ಲಿಮ್ ಬಂಧುಗಳು ಈ

ಗಡಿಯಾರದ ಚೌಕಟ್ಟಿನೊಳಗೆ ತಂದು ತುಂಬದಿರುವ ಯಾವ ಇಸ್ಲಾಮೇತರ ವಸ್ತುವೂ ಇಲ್ಲ.

## ಅನಿರೀಕ್ಷಿತ ಪರಿಣಾಮ

ಈ ಎಲ್ಲಾ ಅವಾಂತರಗಳನ್ನೆಸಗಿಯೂ ಕೀ ಕೊಡುವಾಗ ಗಡಿಯಾರ ಚಲಿಸ ಬೇಕೆಂದೂ ಅದರ ರಚನೆಯ ಉದ್ದೇಶವನ್ನು ಅದು ಈಡೇರಿಸಬೇಕೆಂದೂ ಇದಕ್ಕೆ ನಿಶ್ಚಯಿಸಲಾದ ಶುಚಿಮಾಡುವ, ಎಣ್ಣೆಬಿಡುವ, ಬಿಚ್ಚಿ ಪುನಃ ಜೋಡಿಸುವ ಕಾರ್ಯಗಳಿಂದ ನಿಶ್ಚಿತ ಫಲ ಸಿಗಬೇಕೆಂದೂ ನೀವು ಬಯಸುತ್ತೀರಿ. ಆದರೆ ನೀವು ಸ್ವಲ್ಪ ಯೋಚಿಸಿದರೆ, ಜೀವಮಾನವಿಡೀ ಅದಕ್ಕೆ ಕೀ ಕೊಟ್ಟರೂ ಶುಚಿ ಮಾಡಿ ದರೂ, ಎಣ್ಣೆ ಬಿಟ್ಟರೂ ಯಾವ ಪರಿಣಾಮವೂ ಉಂಟಾಗದೆಂಬುದನ್ನು ಅತಿ ಸುಲಭವಾಗಿ ತಿಳಿದುಕೊಳ್ಳಬಲ್ಲಿರಿ. ನೀವು ಆ ಗಡಿಯಾರಕ್ಕೆ ತಂದೊಡ್ಡಿದ ದುರವಸ್ಥೆ ಯನ್ನು ಗಮನಿಸಿದರೆ, ನೀವು ಹೊರಗಿನಿಂದ ತಂದು ಬಿಗಿದ ಅನ್ಯ ಯಂತ್ರ ಭಾಗಗಳನ್ನು ಆರಂಭದಲ್ಲಿ ತಂದು ಇರಿಸಿದ್ದ ಕ್ರಮದಲ್ಲೇ ಜೋಡಿಸಿ ಬಿಗಿಯದೆ ಇದ್ದರೆ ಈ ಹಿಂದೆ ಅದರಿಂದ ಸಿಗುತ್ತಿದ್ದ ಪ್ರಯೋಜನಗಳು ಈಗ ಸಿಗಬಹುದೆಂದು ನಿರೀಕ್ಷಿಸಬೇಡಿರಿ.

## ಆರಾಧನಾ ಕರ್ಮಗಳು ಪರಿಣಾಮ ಬೀರದಿರಲು ಮೂಲ ಕಾರಣ

ನಿಮ್ಮ ನಮಾಝ್, ಉಪವಾಸ, ಝಕಾತ್ ಮತ್ತು ಹಜ್ಜ್ ಕರ್ಮಗಳು ಪರಿ ಣಾಮಕಾರಿಯಾಗದಿರಲು ಇದೇ ಕಾರಣವೆಂಬುದನ್ನು ನೀವು ಚೆನ್ನಾಗಿ ತಿಳಿದುಕೊಳ್ಳಿರಿ. ಒಂದನೆಯದಾಗಿ ನಿಮ್ಮಲ್ಲಿ ನಮಾಝ್ ಮಾಡುವವರು, ಉಪವಾಸವಿಡುವವರು, ಝಕಾತ್ ಕೊಡುವವರು ಮತ್ತು ಹಜ್ಜ್ ಕರ್ಮ ನೆರವೇರಿಸುವವರು ಎಷ್ಟು ಮಂದಿ ಇದ್ದಾರೆ? ಜಮಾಅತ್ (ಸಂಘಟನೆ) ಶಿಥಿಲವಾಗಿರುವ ಕಾರಣ ಪ್ರತಿಯೊಬ್ಬನೂ ಸ್ವೇಚ್ಛಾಚಾರಿಯಾಗಿದ್ದಾನೆ. ಈ ಕಡ್ಡಾಯ ವಿಧಿಗಳನ್ನು ನೆರವೇರಿಸಿದರೂ ನೆರವೇರಿಸ ದಿದ್ದರೂ ಯಾರೂ ಕೇಳುವವರಿಲ್ಲ. ಇನ್ನು ಅವುಗಳನ್ನು ಯಾರು ನೆರವೇರಿಸುತ್ತಾರೋ ಅವರ ಅವಸ್ಥೆಯೇನು? ನಮಾಝ್‌ನಲ್ಲಿ ಜಮಾಅತ್‌ನ ಪಾಲನೆ ಇಲ್ಲ. ಎಲ್ಲಾದರೂ ಜಮಾಅತ್ ವ್ಯವಸ್ಥೆ ಇದ್ದರೂ ಲೋಕದಲ್ಲಿ ಬೇರಾವ ಕೆಲಸಕ್ಕೂ ಬಾರದಂತಹ ವ್ಯಕ್ತಿಗಳನ್ನು ಇಮಾಮತ್(ನಾಯಕತ್ವ)ಗಾಗಿ ಆಯ್ಕೆ ಮಾಡಲಾಗುತ್ತದೆ. ನಿಮ್ಮನ್ನು ದೇವ ಪ್ರತಿನಿಧಿಯನ್ನಾಗಿಯೂ ದೇವಭಟರನ್ನಾಗಿಯೂ ಮಾಡತಕ್ಕ ನಮಾಝ್‌ನ ಇಮಾಮತ್‌ನ ಸ್ಥಾನಕ್ಕೆ ಮಸೀದಿಯ ಸೊತ್ತನ್ನು ಕಬಳಿಸುವ, ಧಾರ್ಮಿಕ ವಿಧಿಗಳನ್ನು ಸಂಪಾದನೆಯ ಸಾಧನವನ್ನಾಗಿ ಮಾಡಿಕೊಳ್ಳುವ ತಿಳಿಗೇಡಿ ಅಶಿಕ್ಷಿತರನ್ನು, ಪುಕ್ಕರನ್ನು ಹಾಗೂ ಚಾರಿತ್ರ್ಯಹೀನರನ್ನು ನೇಮಿಸುತ್ತೀರಿ. ಇದೇ ರೀತಿಯಲ್ಲಿ ಉಪವಾಸ ವ್ರತ, ಝಕಾತ್ ಮತ್ತು ಹಜ್ಜ್ ಕರ್ಮಗಳ ಅವಸ್ಥೆಯೂ

ಚಿಂತಾಜನಕವಾಗಿದೆ. ಪರಿಸ್ಥಿತಿ ಇಷ್ಟು ಹದಗೆಟ್ಟಿದ್ದರೂ ಈಗಲೂ ತಮ್ಮ ಕರ್ತವ್ಯವನ್ನು ಚೆನ್ನಾಗಿ ನೆರವೇರಿಸುವ ಮುಸ್ಲಿಮರು ಖಂಡಿತ ಇದ್ದಾರೆಂದು ನೀವು ಹೇಳಬಹುದು. ಆದರೆ, ನಾನು ಈ ಹಿಂದೆಯೇ ಹೇಳಿದ್ದೇನೆ. ಗಡಿಯಾರದ ಯಂತ್ರಭಾಗಗಳನ್ನು ಬೇರ್ಪಡಿಸಿ ಅದರಲ್ಲಿ ಹೊರಗಿನ ಅನೇಕ ಭಾಗಗಳನ್ನು ಜೋಡಿಸಿರುವಾಗ ನೀವು ಕೀ ಕೊಟ್ಟರೂ ಕೊಡದಿದ್ದರೂ ಶುಚಿಮಾಡಿದರೂ ಮಾಡದಿದ್ದರೂ ಎಣ್ಣೆ ಬಿಟ್ಟರೂ ಬಿಡದಿದ್ದರೂ ಪ್ರಯೋಜನವಿಲ್ಲ. ನಿಮ್ಮ ಈ ಗಡಿಯಾರವು ದೂರದಿಂದ ಗಡಿ ಯಾರದಂತೆ ತೋರುತ್ತದೆ. ದೂರದಿಂದ ನೋಡುವವರು ಇದನ್ನು ಇಸ್ಲಾಮ್ ಎಂದೂ ನಿಮ್ಮನ್ನು ಮುಸ್ಲಿಮರೆಂದೂ ಹೇಳುತ್ತಾರೆ. ನೀವು ಈ ಗಡಿಯಾರಕ್ಕೆ ಕೀ ಕೊಡುವಾಗಲೂ ಶುಚಿ ಮಾಡುವಾಗಲೂ ದೂರದಿಂದ ನೋಡುವಾತನು ನೀವು ನಿಜವಾಗಿ ಕೀ ಕೊಟ್ಟು ಶುಚಿ ಮಾಡುತ್ತೀರೆಂದೇ ಭಾವಿಸುತ್ತಾನೆ. ಈ ನಮಾಝ್ ನೈಜ ನಮಾಝ್ ಅಲ್ಲವೆಂದು ಯಾರೂ ಹೇಳುವು ದಿಲ್ಲ. ಆದರೆ ಈ ತೋರಿಕೆಯ ಚೌಕಟ್ಟಿನೊಳಗೆ ಏನೆಲ್ಲಾ ಅವಾಂತರ ನಡೆದಿದೆ ಎಂಬುದು ನೋಡುವವರಿಗೇನು ಗೊತ್ತು?

## ನಮ್ಮ ಕಳವಳಕಾರಿ ಸ್ಥಿತಿ

ಮುಸ್ಲಿಮ್ ಬಂಧುಗಳೇ, ನಿಮ್ಮ ಧಾರ್ಮಿಕ ಆಚಾರಗಳೆಲ್ಲಾ ಏಕೆ ನಿಷ್ಫಲ ವಾಗುತ್ತದೆ? ನೀವು ನಮಾಝ್ ಮತ್ತು ಉಪವಾಸ ಕರ್ಮಗಳನ್ನು ನಿರ್ವಹಿಸಿಯೂ ದೇವ ಸೈನಿಕರಾಗುವ ಬದಲು ಮಿಥ್ಯವಾದಿಗಳ ಕಪಿಮುಷ್ಟಿಗೆ ಸಿಲುಕಲು, ಪ್ರತಿ ಯೊಬ್ಬ ಅಕ್ರಮಿಯ ಮರ್ದನಕ್ಕೆ ಬಲಿಯಾಗಲು, ನಿಜವಾದ ಕಾರಣವೇನೆಂಬುದನ್ನು ತೋರಿಸಿದ್ದೇನೆ. ಆದರೆ, ನೀವು ಬೇಸರಗೊಳ್ಳದಿದ್ದರೆ, ನಿಮಗೆ ಇದಕ್ಕಿಂತಲೂ ಅಧಿಕ ದುಃಖದಾಯಕ ವೃತ್ತಾಂತವನ್ನು ತಿಳಿಸುವೆನು. ನಿಮಗೆ ಈ ದುರ್ಗತಿಯ ಬಗ್ಗೆ ವ್ಯಥೆ ಮತ್ತು ಅರಿವು ಇರುವುದು ನಿಜ. ಆದರೆ, ನಿಮ್ಮ ಪೈಕಿ 1,000 ದಲ್ಲಿ 999ಕ್ಕಿಂತಲೂ ಅಧಿಕ ಮಂದಿ ಈ ದುರವಸ್ಥೆಯನ್ನು ಬದಲಿಸಲಿಕ್ಕೆ ಬೇಕಾದ ಸೂಕ್ತ ಕ್ರಮಕೈಗೊಳ್ಳಲು ಸಿದ್ಧರಿಲ್ಲ. ಇಸ್ಲಾಮ್ ಎಂಬ ಈ ಗಡಿಯಾರದೊಳಗಿನ ಮೂಲ ಯಂತ್ರ ಭಾಗಗಳ ಬದಲು ಪ್ರತಿಯೊಬ್ಬನು ತನಗಿಷ್ಟ ಬಂದ ಪ್ರಕಾರ ಜೋಡಿಸಿದ ಇತರ ಯಂತ್ರ ಭಾಗಗಳನ್ನು ಕಿತ್ತು ಅದನ್ನು ಮೂಲ ರೂಪದಲ್ಲಿ ಇದ್ದಂತೆ ಪುನಃ ಜೋಡಿಸುವುದನ್ನು ಅವರಿಗೆ ಸಹಿಸಲಾಗುವುದಿಲ್ಲ. ಏಕೆಂದರೆ, ಹೊರಗಿನಿಂದ ತಂದ ಇತರ ಯಂತ್ರ ಭಾಗಗಳನ್ನು ಕೀಳುವಾಗ, ಅವರ ಮೆಚ್ಚು ಗೆಯ ವಸ್ತುಗಳೂ ಕೀಳಲ್ಪಡುತ್ತವೆ. ಇತರರ ಮೆಚ್ಚುಗೆಯ ವಸ್ತುಗಳನ್ನು ಕೀಳುವುದು ಮತ್ತು ನೀವು ತಂದು ಜೋಡಿಸಿದ ವಸ್ತು ಗಳನ್ನು ಹಾಗೇ ಬಿಡುವುದು ಸರಿಯಲ್ಲ

ತಾನೇ. ಅದೇ ರೀತಿ ಅವುಗಳನ್ನು ಮೊದಲಿ ನಂತೆ ಬಿಗಿದಾಗ ಎಲ್ಲರೂ ಬಿಗಿಯಲ್ಪಡುತ್ತಾರೆ. ಆದರೆ ನಿಮ್ಮನ್ನು ಬಿಗಿಯಬಾರದೆಂದರೆ ಅದೂ ಅಸಾಧ್ಯ. ನೀವು ಬಿಗಿಯಲ್ಪಟ್ಟರೆ, ಎಲ್ಲರೂ ಬಿಗಿಯಲ್ಪಡುತ್ತಾರೆ. ಇದನ್ನು ಆತ್ಮ ಸಂತೋಷದಿಂದ ಸಹಿಸಿಕೊಳ್ಳುವುದು ಅತ್ಯಂತ ಪ್ರಯಾಸಕರ. ಆದ್ದರಿಂದ ಈ ಗಡಿಯಾರವು ಯಥಾವತ್ತಾಗಿ ಗೋಡೆಯ ಅಲಂಕಾರ ವಸ್ತುವಾಗಿಯೇ ಇರಲಿ; ದೂರದ ಜನರನ್ನು ಕರೆ ತಂದು ಅದರ ದರ್ಶನ ಮಾಡಿಸಿ ಅದರಲ್ಲಿರುವ ಪವಾಡಗಳನ್ನು ತೋರಿಸಿದರಾಯಿತೆಂದು ಅವರು ಭಾವಿಸುತ್ತಾರೆ. ಈ ಗಡಿಯಾರವನ್ನು ಇನ್ನಷ್ಟು ಗೌರವಿಸುವವರು ಅದು ಇರುವ ಸ್ಥಿತಿಯಲ್ಲೇ ಕೀ ಕೊಟ್ಟು ಶುಚಿ ಮಾಡಿದರೆ ಸಾಕೆಂದು ಭಾವಿಸುತ್ತಾರೆ. ಆದರೆ ಇದರ ನಿಜವಾದ ಯಂತ್ರ ಭಾಗಗಳನ್ನು ಜೋಡಿಸುವುದು ಮತ್ತು ಹೊರಗಿನಿಂದ ತಂದು ಜೋಡಿಸಿದ ಯಂತ್ರಭಾಗಗಳನ್ನು ಕಿತ್ತೊಗೆಯುವುದು ಅಗತ್ಯವೆಂದು ಅವರು ಮನಗಾಣದಿರುವುದು ಅತ್ಯಂತ ಖೇದಕರ!

ನಿಮ್ಮೊಂದಿಗೆ ನಾನೂ ತಲೆದೂಗುತ್ತಿದ್ದೆ. ಆದರೇನು ಮಾಡಲಿ? ನನಗೆ ತಿಳಿದಿರುವುದರ ವಿರುದ್ಧ ಹೇಳಲಾರೆ. ನೀವು ಈ ದುರವಸ್ಥೆಯಲ್ಲಿ ಐದು ಹೊತ್ತುಗಳ ಕಡ್ಡಾಯ ನಮಾಝ್‌ಗಳೊಂದಿಗೆ ತಹಜ್ಜುದ್ (ರಾತ್ರೆ ನಿದ್ದೆಯಿಂದೆದ್ದು ಮಾಡುವ ಐಚ್ಛಿಕ ನಮಾಝ್) ಇಶ್ರಾಕ್ (ಸೂರ್ಯೋದಯವಾದ ಸ್ವಲ್ಪ ಹೊತ್ತಿನ ನಂತರ ಮಾಡುವ ಐಚ್ಛಿಕ ನಮಾಝ್) ಚಾಷ್ತ್ (ಮಧ್ಯಾಹ್ನಕ್ಕೆ ಮುಂಚೆ ಮಾಡುವ ಐಚ್ಛಿಕ ನಮಾಝ್)ಗಳನ್ನು ಮಾಡಿದರೂ, ದಿನಂಪ್ರತಿ ಐದು ತಾಸುಗಳ ತನಕ ಕುರ್‌ಆನ್ ಪಾರಾಯಣಗೈದರೂ ರಮಝಾನ್‌ನ ಹೊರತು ಇತರ ಹನ್ನೊಂದು ತಿಂಗಳುಗಳಲ್ಲಿ ಐದೂವರೆ ತಿಂಗಳುಗಳ ಅಧಿಕ ಉಪವಾಸ ವ್ರತವನ್ನಾಚರಿಸಿದರೂ ಏನೂ ಪ್ರಯೋಜನವಿಲ್ಲ. ಗಡಿಯಾರದೊಳಗೆ ಅದರದೇ ಆದ ಯಂತ್ರ ಭಾಗಗಳನ್ನು ಇರಿಸಿ ಜೋಡಿಸಿದರೆ, ಸ್ವಲ್ಪ ಕೀ ಕೊಟ್ಟರೂ ಅಲ್ಪ ಶುಚಿ ಮಾಡಿದರೂ ಒಂದಿಷ್ಟು ಎಣ್ಣೆ ಬಿಟ್ಟರೂ ಪ್ರಯೋಜನ ಸಿಗಬಹುದು. ಇಲ್ಲವಾದರೆ ಜೀವಮಾನವಿಡೀ ಕೀ ಕೊಡುತ್ತಲಿದ್ದರೂ ಗಡಿಯಾರ ನಡೆಯಲಾರದು.




# ಉಪವಾಸ ವ್ರತ

ಮುಸ್ಲಿಮ್ ಬಂಧುಗಳೇ,

ಅಲ್ಲಾಹನು ನಿಮ್ಮ ಮೇಲೆ ಕಡ್ಡಾಯಗೊಳಿಸಿದ ಇನ್ನೊಂದು ಇಬಾದತ್ 'ಉಪವಾಸ ವ್ರತ'ವಾಗಿದೆ. ಮುಂಜಾವಿನಿಂದ ಸಂಜೆಯ ತನಕ ಆಹಾರ, ಪಾನೀಯ, ಸಂಭೋಗಾದಿಗಳನ್ನು ವರ್ಜಿಸುವುದಕ್ಕೆ ಉಪವಾಸ ವ್ರತವೆನ್ನುತ್ತಾರೆ.

## ಎಲ್ಲ ಸಮುದಾಯಗಳಿಗೂ ಉಪವಾಸ ವ್ರತ ಕಡ್ಡಾಯಗೊಳಿಸಲಾಗಿತ್ತು

ನಮಾಝ್‌ನಂತೆಯೇ ಈ ಇಬಾದತ್ ಕೂಡಾ ಆದಿಯಿಂದಲೇ ಎಲ್ಲಾ ಪ್ರವಾದಿಗಳ ಧರ್ಮಶಾಸ್ತ್ರಗಳಲ್ಲಿ ಕಡ್ಡಾಯಗೊಳಿಸಲಾಗಿದೆ. ಹಝ್ರತ್ ಮುಹಮ್ಮದ್(ಸ) ಅವರ ಸಮುದಾಯದವರಾಗಿರುವ ನಾವು ಉಪವಾಸ ವ್ರತವನ್ನಾಚರಿಸುವಂತೆಯೇ ಗತ ಪ್ರವಾದಿಗಳ ಸಮುದಾಯಗಳೂ ಆಚರಿಸುತ್ತಿದ್ದುವು.

ಆದರೆ ಉಪವಾಸ ವ್ರತದ ವಿಧಿ ವಿಧಾನಗಳು, ಉಪವಾಸದ ದಿನಗಳು ಮತ್ತು ಅದರ ಕಾಲ ಇತ್ಯಾದಿ ವಿಷಯಗಳಲ್ಲಿ ಧರ್ಮಶಾಸ್ತ್ರಗಳಲ್ಲಿ ವ್ಯತ್ಯಾಸಗಳಿರುತ್ತಿದ್ದುವು. ಜನರು ಇದರಲ್ಲಿ ಹಲವಾರು ವಿಷಯಗಳನ್ನು ತಮ್ಮ ಕಡೆಯಿಂದ ಸೇರಿಸಿ ಅದರ ರೂಪುಗೆಡಿಸಿ ಬಿಟ್ಟಿದ್ದರು. ಆದರೆ ಇಂದಿಗೂ ಇತರ ಧರ್ಮಗಳಲ್ಲಿ ಉಪವಾಸ ವ್ರತ ಯಾವುದಾದರೊಂದು ರೂಪದಲ್ಲಿರುವುದನ್ನು ನಾವು ಕಾಣುತ್ತೇವೆ. ಪವಿತ್ರ ಕುರ್‌ಆನಿನಲ್ಲಿ ಹೀಗೆ ಆದೇಶಿಸಲಾಗಿದೆ, "ಓ ಸತ್ಯವಿಶ್ವಾಸಿಗಳೇ, ನಿಮ ಗಿಂತ ಮುಂಚಿನ ಸಮುದಾಯಗಳಿಗೆ ಉಪವಾಸ ವ್ರತವನ್ನು ಕಡ್ಡಾಯಗೊಳಿ ಸಿದ್ದಂತೆಯೇ ನಿಮಗೂ ಕಡ್ಡಾಯಗೊಳಿಸಲಾಗಿರುತ್ತದೆ" **(ಪವಿತ್ರ ಕುರ್‌ಆನ್: 2: 183)**

ಅಲ್ಲಾಹನ ವತಿಯಿಂದ ಬಂದ ಧರ್ಮಶಾಸ್ತ್ರಗಳು ಯಾವ ಕಾಲದಲ್ಲೂ ಉಪವಾಸದ ಇಬಾದತ್‌ನಿಂದ ಬರಿದಾಗಿರಲಿಲ್ಲವೆಂದು ಇದರಿಂದ ವ್ಯಕ್ತವಾಗುತ್ತದೆ. ಅಲ್ಲಾಹನು ಉಪವಾಸವೆಂಬ ಇಬಾದತನ್ನು ಎಲ್ಲಾ ಕಾಲಗಳಲ್ಲೂ ಕಡ್ಡಾಯ ಗೊಳಿಸಿರಲು ಕಾರಣವೇನಿರಬಹುದೆಂಬ ಬಗ್ಗೆ ಊಹಿಸಿರಿ.

## ಜೀವನೋದ್ದೇಶ: ಪ್ರಭುವಿನ ದಾಸ್ಯ–ಆರಾಧನೆ

ಮಾನವನ ಸಂಪೂರ್ಣ ಜೀವನವನ್ನು ಅಲ್ಲಾಹನ ಇಬಾದತನ್ನಾಗಿ ಪರಿವರ್ತಿಸುವುದೇ ಇಸ್ಲಾಮ್‌ನ ನಿಜವಾದ ಉದ್ದೇಶವೆಂದು ಹಿಂದೆ ಅನೇಕ ಸಲ ವಿವರಿಸಿರುತ್ತೇನೆ. ಮಾನವನು 'ಅಬ್ದ್' ಅರ್ಥಾತ್ ದಾಸನಾಗಿ ಜನಿಸಿದ್ದಾನೆ. ದಾಸ್ಯ–ಆರಾಧನೆಯೇ ಅವನ ಸಹಜ ಪ್ರಕೃತಿ. ಆದುದರಿಂದ ಇಬಾದತ್ ಅರ್ಥಾತ್ ಆಚಾರ–ವಿಚಾರಗಳಲ್ಲಿ ಒಂದು ಘಳಿಗೆಯ ಮಟ್ಟಿಗಾದರೂ ಅವನು ದಾಸ್ಯ ಮುಕ್ತನಾಗಿರಬಾರದು. ಅವನು ತನ್ನ ಜೀವನದ ಎಲ್ಲಾ ವ್ಯವಹಾರಗಳಲ್ಲೂ ಅಲ್ಲಾಹನ ಮೆಚ್ಚುಗೆ ಮತ್ತು ಸಂಪ್ರೀತಿ ಯಾವುದರಲ್ಲಿದೆ ಹಾಗೂ ಅವನ ಕ್ರೋಧ ಮತ್ತು ಅಪ್ರಸನ್ನತೆ ಯಾವುದರಲ್ಲಿದೆ ಎಂಬುದನ್ನು ನೋಡುತ್ತಿರಬೇಕು. ಆ ಬಳಿಕ ಅವನ ಮೆಚ್ಚುಗೆಯ ಕಡೆಗೆ ಸಾಗಬೇಕು. ಅವನ ಅಪ್ರಸನ್ನತೆ ಹಾಗೂ ಕ್ರೋಧವಿರುವ ಕಾರ್ಯಗಳಿಂದ, ಉರಿಯುವ ಕೆಂಡಗಳಿಂದ ದೂರ ಸರಿಯುವಂತೆ, ಸರಿಯಬೇಕು. ಅಲ್ಲಾಹನು ಮೆಚ್ಚುವ ಪದ್ಧತಿಯಂತೆ ನಡೆಯಬೇಕು ಮತ್ತು ಅವನು ಮೆಚ್ಚದ ಪದ್ಧತಿಯಿಂದ ದೂರವಿರಬೇಕು. ಒಬ್ಬನ ಇಡೀ ಜೀವನವು ಈ ವರ್ಣವನ್ನು ಹೊಂದಿದಾಗ ಅವನು ತನ್ನೊಡೆಯನ ಉದ್ದೇಶವಾದ, "ನಾನು ಯಕ್ಷಗಳನ್ನೂ ಮನುಷ್ಯರನ್ನೂ ಸೃಷ್ಟಿಸಿರುವುದು ನನ್ನ ದಾಸ್ಯ ಮತ್ತು ಆರಾಧನೆಗಾಗಿಯೇ ಹೊರತು ಬೇರಾವುದೇ ಕಾರ್ಯಕ್ಕಾಗಿ ಅಲ್ಲ" (ಪವಿತ್ರ ಕುರ್‌ಆನ್: 51: 56) ಎಂಬುದನ್ನು ಪೂರ್ತಿಗೊಳಿಸಿದನೆಂದೂ ತಿಳಿದುಕೊಳ್ಳಿರಿ.

## ಆರಾಧನಾ ಕರ್ಮಗಳು: ದಾಸ್ಯ–ಅನುಸರಣೆಯ ತರಬೇತಿ

ನಮಾಝ್, ಉಪವಾಸ ವ್ರತ, ಹಜ್ಜ್ ಯಾತ್ರೆ ಮತ್ತು ಝಕಾತ್‌ಗಳ ಹೆಸರಲ್ಲಿ ನಮ್ಮ ಮೇಲೆ ಕಡ್ಡಾಯಗೊಳಿಸಲಾಗಿರುವ ಇಬಾದತ್‌ಗಳ ನಿಜವಾದ ಉದ್ದೇಶವು ಆ ಮಹಾ ಇಬಾದತ್‌ಗಾಗಿ ಅಣಿಗೊಳಿಸುವುದೆಂಬುದನ್ನು ವಿವರಿಸಿರುತ್ತೇನೆ. ನೀವು ದಿನಕ್ಕೈದಾವರ್ತಿ ನಮಾಝ್‌ನಲ್ಲಿ ರುಕೂಅ್ ಮತ್ತು ಸುಜೂದ್ ಮಾಡಿಕೊಂಡಾಗ, ರಮಝಾನ್ ತಿಂಗಳಿಡೀ ಮುಂಜಾವಿನಿಂದ ಸಂಜೆಯ ತನಕ ಹಸಿವು ದಾಹಗಳನ್ನು ಸಹಿಸಿಕೊಂಡಾಗ, ಧನಿಕರಾಗಿದ್ದರೆ ವರ್ಷದಲ್ಲೊಮ್ಮೆ ಝಕಾತ್ ಕೊಟ್ಟಾಗ ಮತ್ತು ಜೀವನದಲ್ಲೊಂದು ಸಲ ಹಜ್ಜ್ ಯಾತ್ರೆಯನ್ನು ಕೈಗೊಂಡಾಗ ನಿಮ್ಮ ಮೇಲೆ ಇರುವ ಅಲ್ಲಾಹನ ಹಕ್ಕು ತೀರಿತೆಂದೂ ಇನ್ನು ನೀವು ನಿಮ್ಮಿಚ್ಛೆಯಂತೆ ನಡೆಯಲು ಸ್ವತಂತ್ರರೆಂದೂ ಅವುಗಳನ್ನು ನಿಮಗೆ ಕಡ್ಡಾಯಗೊಳಿಸಲಾಗಿಲ್ಲ. ಅವುಗಳ ಮೂಲಕ ಮಾನವನ ತರಬೇತಿಯಾಗಬೇಕು ಮತ್ತು ಅವನ ಇಡೀ ಜೀವನವೇ ಅಲ್ಲಾಹನ ಇಬಾದತ್ ಆಗಿ ಮಾರ್ಪಡಬೇಕೆಂದು ಈ ಇಬಾದತ್‌ಗಳನ್ನು

ಕಡ್ಡಾಯಗೊಳಿಸಲಾಗಿದೆ. ಈ ಉದ್ದೇಶವನ್ನು ಮುಂದಿರಿಸಿಕೊಂಡು ಉಪವಾಸ ವ್ರತವು ಮಾನವನನ್ನು ಆ ಮಹಾ ಇಬಾದತ್‌ಗಾಗಿ ಹೇಗೆ ಅಣಿಗೊಳಿಸುತ್ತದೆಂಬುದನ್ನು ನೋಡೋಣ–

## ಉಪವಾಸ: ಒಂದು ಪ್ರಾಯೋಗಿಕ ಆರಾಧನಾ ಕರ್ಮ

ಉಪವಾಸದ ಹೊರತು ಇತರ ಎಲ್ಲಾ ತರದ ಇಬಾದತ್‌ಗಳು ಯಾವುದಾದರೊಂದು ರೀತಿಯ ಬಾಹ್ಯ ಆಚಾರಗಳೊಂದಿಗೆ ನೆರವೇರಿಸಲ್ಪಡುತ್ತವೆ.

ಉದಾಹರಣೆಗೆ: ನಮಾಝ್‌ನಲ್ಲಿ ಒಬ್ಬನು ನಿಲ್ಲುವುದನ್ನು, ಕೂರುವುದನ್ನು, ಬಾಗುವುದನ್ನು ಮತ್ತು ಸಾಷ್ಟಾಂಗವೆರಗುವುದನ್ನು ಇತರರು ಕಾಣುತ್ತಾರೆ. ಹಜ್ಜ್ ಯಾತ್ರೆಯಲ್ಲಿ ಒಂದು ದೀರ್ಘ ಪ್ರಯಾಣ ಕೈಗೊಳ್ಳಲಾಗುತ್ತದೆ. ಈ ಪ್ರಯಾಣವು ಸಾವಿರಾರು ಅಥವಾ ಲಕ್ಷಾವಧಿ ಜನರೊಂದಿಗೆ ಸಾಗುತ್ತದೆ. ಝಕಾತನ್ನು ಕನಿಷ್ಠ ಪಕ್ಷ ಒಬ್ಬನು ಕೊಡುತ್ತಾನೆ, ಇನ್ನೊಬ್ಬನು ಪಡೆಯುತ್ತಾನೆ. ಈ ಎಲ್ಲಾ ಇಬಾದತ್‌ಗಳ ಸ್ಥಿತಿ ರಹಸ್ಯವಾಗಿರಲು ಸಾಧ್ಯವೇ ಇಲ್ಲ. ನೀವು ಅವುಗಳನ್ನು ಮಾಡಿದರೂ ಇತರರಿಗೆ ತಿಳಿಯುತ್ತದೆ. ಮಾಡದಿದ್ದಾಗಲೂ ಜನರ ತಿಳುವಳಿಕೆಗೆ ಬರುತ್ತದೆ.

ಇದಕ್ಕೆ ತೀರಾ ವ್ಯತಿರಿಕ್ತವಾಗಿ, ಉಪವಾಸವೆಂಬ ಇಬಾದತ್‌ನ ಸ್ಥಿತಿಯ ನಿಜವಾದ ಅರಿವು ದೇವನಿಗೆ ಮತ್ತು ದಾಸನಿಗೆ ಹೊರತು ಇನ್ನೊಬ್ಬನಿಗೆ ಆಗುವುದಿಲ್ಲ. ಒಬ್ಬನು ಎಲ್ಲರೆದುರು ಸಹ್ರೀ (ಉಪವಾಸ ಮಾಡುವುದರ ಮುಂಚೆ ಮಾಡುವ ಭೋಜನ) ಉಂಡು, ಇಫ್ತಾರ್ (ಪಾರಣೆ) ವರೆಗೆ ಪ್ರತ್ಯಕ್ಷವಾಗಿ ಏನನ್ನೂ ತಿನ್ನದೆ, ಕುಡಿಯದೆ, ಮರೆಯಲ್ಲಿ ನೀರು ಕುಡಿದರೆ ಅಥವಾ ಅಡಗಿಕೊಂಡು ಉಂಡರೆ ಅದು ಅಲ್ಲಾಹನ ಹೊರತು ಬೇರಾರಿಗೂ ತಿಳಿಯದು. ಎಲ್ಲರೂ ಅವನನ್ನು ಉಪವಾಸಿಗನೆಂದೇ ಭಾವಿಸುವರು. ಆದರೆ ಅವನಿಗೆ ಉಪವಾಸವಿಲ್ಲದಿರಬಹುದು.

## ಉಪವಾಸ ವ್ರತ: ಸತ್ಯವಿಶ್ವಾಸದ ದೃಢತೆಯ ಸಂಕೇತ

ಉಪವಾಸದ ಈ ನೆಲೆಯನ್ನು ಗಮನದಲ್ಲಿಟ್ಟುಕೊಂಡು, ನಿಜವಾಗಿಯೂ ಒಬ್ಬನು ಉಪವಾಸವಿದ್ದು ಮರೆಯಲ್ಲಿ ತಿನ್ನದೆ, ಕುಡಿಯದೆ, ಸುಡು ಬೇಸಗೆ ದಿನಗಳಲ್ಲಿ ಬಾಯಾರಿ ಗಂಟಲ ಪಸೆ ಆರಿ ಹೋದರೂ ನೀರಿನ ಒಂದು ಹನಿ ಯನ್ನೂ ಗಂಟಲಿಗಿಳಿಸದೆ, ಹಸಿವೆಯಿಂದ ಬಳಲಿ ಬೆಂಡಾದರೂ ತಿನ್ನುವ ಇಚ್ಛೆಯನ್ನೇ ಮಾಡದೆ ಇದ್ದರೆ, ಅವನಿಗೆ ಅಲ್ಲಾಹನು ಪರೋಕ್ಷ ಜ್ಞಾನಿಯಾಗಿದ್ದಾನೆ ಎಂಬ ಬಗ್ಗೆ ಎಷ್ಟೊಂದು ಅಚಲ ವಿಶ್ವಾಸವಿದೆ ಎಂಬುದನ್ನು ಊಹಿಸಿರಿ. ಅವನ ವರ್ತನೆಯು ಇಡೀ ಜಗತ್ತಿನಿಂದ ಅಡಗಿದರೂ ಅಲ್ಲಾಹನಿಂದ ಅಡಗಿರಲಾರದೆಂಬು

ದನ್ನು ಅವನು ಎಷ್ಟು ದೃಢವಾಗಿ ನಂಬಿದ್ದಾನೆ. ಎಂತಹ ಕಠಿಣ ಪರಿಸ್ಥಿತಿ ಎದುರಾದರೂ ಕೇವಲ ಅಲ್ಲಾಹನಿಗೆ ಭಯಪಟ್ಟು ಉಪವಾಸ ಮುರಿದು ಹೋಗಬಹುದಾದ ಯಾವ ಕಾರ್ಯವನ್ನೂ ಮಾಡದಿರಬೇಕಾದರೆ ಅವನಲ್ಲಿ ಅದೆಷ್ಟು ಉನ್ನತ ಮಟ್ಟದ ದೇವ ಭಯವಿರಬೇಕು? ಒಂದು ತಿಂಗಳಲ್ಲಿ ಕನಿಷ್ಠ ಪಕ್ಷ 360 ಗಂಟೆಗಳ ಕಾಲ ಉಪವಾಸವಿದ್ದು, ಈ ಅವಧಿಯಲ್ಲಿ ಒಂದು ಕ್ಷಣಕ್ಕಾದರೂ ಅವನ ಹೃದಯದಲ್ಲಿ ಪರಲೋಕದ ಬಗ್ಗೆ ಚಾಂಚಲ್ಯ ಮತ್ತು ಸಂಶಯವಿಲ್ಲದಿರಬೇಕಾದರೆ ಅವನಿಗೆ ಪರಲೋಕದ ಮೇಲೆ ಅದೆಂತಹ ದೃಢ ವಿಶ್ವಾಸವಿರಬೇಕು! ಆಖಿರತ್ (ಪರಲೋಕ) ಎಂಬುದಿದೆಯೇ ಅಲ್ಲಿ ರಕ್ಷೆ–ಶಿಕ್ಷೆಗಳಿವೆಯೇ ಎಂಬ ಬಗ್ಗೆ ಅವನಿಗೆ ಸ್ವಲ್ಪವಾದರೂ ಸಂದೇಹವಿರುತ್ತಿದ್ದರೆ, ಅವನು ಖಂಡಿತ ಉಪವಾಸ ಪೂರ್ತಿಗೊಳಿಸುತ್ತಿರಲಿಲ್ಲ. ಸಂಶಯವುಂಟಾದ ಬಳಿಕ ಮನುಷ್ಯನಿಗೆ ದೇವಾಜ್ಞೆಯಂತೆ ಏನನ್ನೂ ತಿನ್ನಬಾರದು, ಕುಡಿಯಬಾರದು ಎಂಬ ವಿಚಾರದಲ್ಲಿ ಸ್ಥಿರವಾಗಿ ನಿಲ್ಲಲು ಎಂದಿಗೂ ಸಾಧ್ಯವಿಲ್ಲ.

## ಒಂದು ತಿಂಗಳ ನಿರಂತರ ತರಬೇತಿ

ಹೀಗೆ ಅಲ್ಲಾಹನು ಪ್ರತೀ ವರ್ಷವೂ ಸಂಪೂರ್ಣ ಒಂದು ತಿಂಗಳ ವರೆಗೆ ಮುಸ್ಲಿಮರ ವಿಶ್ವಾಸವನ್ನು ನಿರಂತರ ಪರೀಕ್ಷೆಗೊಳಪಡಿಸುತ್ತಾನೆ. ಈ ಪರೀಕ್ಷೆಯಲ್ಲಿ ಅವನು ಯಾವ ಮಟ್ಟದ ಸಫಲತೆಯನ್ನು ಪಡೆಯುತ್ತಾ ಬರುತ್ತಾನೋ ಅದೇ ಮಟ್ಟದಲ್ಲಿ ಅವನ ವಿಶ್ವಾಸ ಬಲಗೊಳ್ಳುತ್ತಾ ಬರುತ್ತದೆ. ಹೀಗೆ ಇದು ಪರೀಕ್ಷೆಯ ಪರೀಕ್ಷೆ ಮತ್ತು ತರಬೇತಿಯ ತರಬೇತಿಯಾಗಿರುತ್ತದೆ. ನೀವು ಯಾರಲ್ಲಾದರೂ ಒಂದು ಅಮಾನತ್ತನ್ನಿರಿಸಲು ಬಯಸಿದಾಗ ಮೊದಲು ಅವನ ಪ್ರಾಮಾಣಿಕತೆಯನ್ನು ಪರೀಕ್ಷಿಸಿಕೊಳ್ಳುತ್ತೀರಿ. ಅವನು ಠಕ್ಕನಲ್ಲವೆಂದು ಕಂಡಾಗ ಅವನ ವಶಕ್ಕೆ ಅಮಾನತ್ತನ್ನು ಕೊಡುತ್ತೀರಿ. ಆಗ ಅವನಲ್ಲಿ ಅದನ್ನು ವಹಿಸುವ ಸಾಮರ್ಥ್ಯ ಹೆಚ್ಚುತ್ತದೆ. ಅವನು ಇನ್ನಷ್ಟು ಪ್ರಾಮಾಣಿಕನಾಗುತ್ತಾ ಹೋಗುತ್ತಾನೆ. ಇದೇ ರೀತಿಯಲ್ಲಿ ಅಲ್ಲಾಹನೂ ನಿರಂತರ ಒಂದು ತಿಂಗಳ ತನಕ ಪ್ರತಿದಿನ ಹನ್ನೆರಡರಿಂದ ಹದಿನಾಲ್ಕು ಗಂಟೆಗಳ ತನಕ ನಿಮ್ಮ ವಿಶ್ವಾಸದ ಕಠಿಣ ರೀತಿಯ ಪರೀಕ್ಷೆ ನಡೆಸುತ್ತಾನೆ. ನೀವು ಆ ಪರೀಕ್ಷೆಯಲ್ಲಿ ಉತ್ತೀರ್ಣರಾದಾಗ ನಿಮ್ಮಲ್ಲಿ ಅಲ್ಲಾಹನನ್ನು ಭಯಪಟ್ಟು ಪಾಪಕಾರ್ಯಗಳಿಂದ ದೂರವಿರುವ ಶಕ್ತಿ ಇನ್ನಷ್ಟು ವೃದ್ಧಿಸುತ್ತದೆ. ಅಲ್ಲಾಹನನ್ನು ಪರೋಕ್ಷ ಜ್ಞಾನಿಯೆಂದು ತಿಳಿದು, ರಹಸ್ಯವಾಗಿಯೂ ಅವನ ಕಾನೂನುಗಳನ್ನು ಮುರಿಯಲಾರಿರಿ. ನಿಮ್ಮ ಎಲ್ಲಾ ರಹಸ್ಯಗಳೂ ಬಯಲಾಗುವ ಯಾವುದೇ ರಿಯಾಯಿತಿಯಿಲ್ಲದೆ ಒಳಿತಿಗೆ ಪುರಸ್ಕಾರ ಮತ್ತು ಕೆಡುಕಿಗೆ ಶಿಕ್ಷೆ ಸಿಗಲಿರುವ ಕಿಯಾಮತ್‌ನ (ನಿರ್ಣಾಯಕ ದಿನ) ನೆನಪನ್ನು ಸದಾ ಇರಿಸಿಕೊಳ್ಳುವಿರಿ.

“ಓ ಸತ್ಯವಿಶ್ವಾಸಿಗಳೇ, ಗತ ಪ್ರವಾದಿಗಳ ಅನುಯಾಯಿಗಳಿಗೆ ಕಡ್ಡಾಯ ಗೊಳಿಸಿದ್ದಂತೆಯೇ ನಿಮ್ಮ ಮೇಲೂ ಉಪವಾಸ ವ್ರತವನ್ನು ಕಡ್ಡಾಯಗೊಳಿಸಲಾಗಿದೆ. ಇದರಿಂದ ನಿಮ್ಮಲ್ಲಿ ಧರ್ಮನಿಷ್ಠೆಯ ಗುಣವಿಶೇಷವುಂಟಾಗುವುದೆಂದು ಆಶಿಸಲಾಗಿದೆ.” (ಪವಿತ್ರ ಕುರ್‌ಆನ್: 2: 118) ಎಂಬ ಆಯತ್‌ನ ತಾತ್ಪರ್ಯ ಇದೇ ಆಗಿದೆ.

## ಅನುಸರಣೆಯ ಸುದೀರ್ಘ ಅಭ್ಯಾಸ

ಉಪವಾಸ ವ್ರತದಲ್ಲಿ ಇನ್ನೊಂದು ವೈಶಿಷ್ಟ್ಯವೂ ಇದೆ. ಅದು ಒಂದು ದೀರ್ಘ ಕಾಲದ ವರೆಗೆ ಶರೀಅತ್‌ನ (ಧರ್ಮಶಾಸ್ತ್ರ) ಅನುಸರಣೆಯನ್ನು ನಿರಂತರ ವಾಗಿ ಮಾಡಿಸುತ್ತದೆ. ನಮಾಝ್‌ನ ಅವಧಿ ಕೆಲವು ನಿಮಿಷಗಳಿಗಿಂತ ಹೆಚ್ಚಿರುವುದಿಲ್ಲ. ‘ಝಕಾತ್’ ಸಲ್ಲಿಸುವ ಕಾಲವೂ ವರ್ಷದಲ್ಲಿ ಒಮ್ಮೆ ಮಾತ್ರ ಬರುತ್ತದೆ. ‘ಹಜ್ಜ್’ ನಲ್ಲೇನೋ ಒಂದು ದೀರ್ಘ ಕಾಲ ವ್ಯಯವಾಗುತ್ತದೆ. ಆದರೆ ಅದು ಜೀವಮಾನದಲ್ಲಿ ಒಮ್ಮೆ ಮಾತ್ರ ಬರುತ್ತದೆ. ಅದೂ ಎಲ್ಲರಿಗಲ್ಲ. ಇವೆಲ್ಲವುಗಳಿಗೆ ವ್ಯತಿರಿಕ್ತವಾಗಿ ಉಪವಾಸವು ಪ್ರತಿ ವರ್ಷವೂ ಒಂದು ತಿಂಗಳ ವರೆಗೆ ರಾತ್ರಿ ಹಗಲು ಇಸ್ಲಾಮೀ ಧರ್ಮಶಾಸ್ತ್ರವನ್ನು ಅನುಸರಿಸುವ ಅಭ್ಯಾಸ ಮಾಡಿಸುತ್ತದೆ. ಪ್ರಭಾತಕ್ಕಿಂತ ಸಾಕಷ್ಟು ಮೊದಲೇ ಸಹ್ರೀಗಾಗಿ ಏಳಬೇಕು. ನಿಶ್ಚಿತ ಸಮಯ ಬಂದೊಡನೆ ಅನ್ನ ಪಾನೀಯ ಗಳನ್ನು ನಿಲ್ಲಿಸಬೇಕು. ಹಗಲಿಡೀ ಈ ಕೆಲಸಗಳನ್ನು ಮಾಡಬಹುದು. ಆ ಕೆಲಸ ಗಳನ್ನು ಮಾಡಬಾರದು. ಸಂಜೆ ಇಷ್ಟು ಹೊತ್ತಿಗೆ ಸರಿಯಾಗಿ ಇಫ್ತಾರ್ (ಪಾರಣೆ) ಮಾಡಬೇಕು. ತರುವಾಯ ಊಟ ಮಾಡಿ ಕೊಂಚ ವಿಶ್ರಮಿಸಬೇಕು. ಆ ಬಳಿಕ ತರಾವೀಹ್ ನಮಾಝ್‌ಗೆ ಹೋಗಬೇಕು. ಹೀಗೆ ವರ್ಷಂಪ್ರತಿ ನಿರಂತರ ಒಂದು ತಿಂಗಳ ವರೆಗೆ ಮುಂಜಾವಿನಿಂದ ಸಂಜೆಯ ತನಕ ಮತ್ತು ಸಂಜೆಯಿಂದ ಮುಂಜಾವಿನ ತನಕ ಒಬ್ಬ ಮುಸ್ಲಿಮನನ್ನು ನಿರಂತರವಾಗಿ ಸೈನಿಕನಂತೆ ಶಿಸ್ತು ಮತ್ತು ನಿಯಮ ಪಾಲನೆಯಲ್ಲಿ ಬಿಗಿದಿರಿಸಲಾಗುತ್ತದೆ. ಈ ಒಂದು ತಿಂಗಳಲ್ಲಿ ಪಡೆದ ತರಬೇತಿಯ ಪ್ರಭಾವವು ಅನಂತರದ ಹನ್ನೊಂದು ತಿಂಗಳುಗಳಲ್ಲಿ ಪ್ರಕಟ ವಾಗುವಂತೆ ಮತ್ತು ಈ ಅವಧಿಯಲ್ಲೇನಾದರೂ ಕುಂದು ಕೊರತೆಗಳು ತಲೆದೋರಿದರೆ, ಮರು ವರ್ಷದ ತರಬೇತಿಯಲ್ಲಿ ನೀಗಿಸುವಂತೆ ಅವನನ್ನು ಬಿಟ್ಟುಬಿಡಲಾಗುತ್ತದೆ.

## ತರಬೇತಿಗಾಗಿ ಸೂಕ್ತ ಸಾಮೂಹಿಕ ವಾತಾವರಣ

ಈ ರೀತಿಯ ತರಬೇತಿಗೆ ಒಬ್ಬೊಬ್ಬನನ್ನೇ ಆಯ್ದುಕೊಳ್ಳುವುದು ಸರಿ ಯಾಗಲಾರದು. ಸೈನಿಕರಿಗೂ ವೈಯಕ್ತಿಕವಾಗಿ ಬೇರೆ ಬೇರೆ ಕವಾಯಿತು ಮಾಡಿಸ ಲಾಗುವುದಿಲ್ಲ. ಇಡೀ ಸೈನ್ಯವು ಸಾಮೂಹಿಕವಾಗಿ ಒಮ್ಮೆಲೇ ಕವಾಯಿತು ಮಾಡು ವುದನ್ನು ನೀವು ಕಂಡಿರ ಬಹುದು. ಒಂದೇ ಕಹಳೆಯ ಧ್ವನಿಗೆ ಅವರೆಲ್ಲರೂ

ಎದ್ದು ಆ ಧ್ವನಿಗೆ ಅನುಸಾರವಾಗಿ ಕೆಲಸ ಮಾಡಬೇಕಾಗುತ್ತದೆ. ಇದು, ಸೈನಿಕರಿಗೆ ಸಾಮೂಹಿಕವಾಗಿ ಒಗ್ಗಟ್ಟಿನಿಂದ ಹೋರಾಡುವ ಅಭ್ಯಾಸವಾಗಬೇಕು, ತರಬೇತಿಯಲ್ಲಿ ಅವರು ಪರಸ್ಪರ ಸಹಾಯಕರಾಗಬೇಕು, ಅರ್ಥಾತ್ ಒಬ್ಬನ ತರಬೇತಿಯಲ್ಲೇನಾದರೂ ಕೊರತೆಯುಂಟಾದರೆ, ಅದನ್ನು ಇನ್ನೊಬ್ಬನೂ ಅವನ ಕೊರತೆಯನ್ನು ಮತ್ತೊಬ್ಬನೂ ನೀಗಿಸಿಕೊಳ್ಳಬೇಕು ಎಂಬ ಕಾರಣಕ್ಕಾಗಿರುತ್ತದೆ. ಇದೇ ಪ್ರಕಾರ ಇಸ್ಲಾಮಿನಲ್ಲಿಯೂ ರಮಝಾನ್ ತಿಂಗಳನ್ನು ಉಪವಾಸವೆಂಬ ಆರಾಧನೆಗಾಗಿ ಆಯ್ಕೆ ಮಾಡಿಕೊಂಡು ಏಕಕಾಲದಲ್ಲಿ ಎಲ್ಲರೂ ಒಟ್ಟಾಗಿ ಉಪವಾಸವಿರಬೇಕೆಂದು ಮುಸ್ಲಿಮರಿಗೆ ಆದೇಶಿಸ ಲಾಗಿದೆ. ಈ ಆದೇಶವು ವೈಯಕ್ತಿಕ ಇಬಾದತನ್ನು ಸಾಮೂಹಿಕ ಇಬಾದತ್ ಆಗಿ ಮಾಡಿದೆ. 'ಒಂದು' ಎಂಬ ಸಂಖ್ಯೆಯನ್ನು ಲಕ್ಷದಿಂದ ಗುಣಿಸಿದಾಗ ಒಂದು ಲಕ್ಷವೆಂಬ ಅತಿ ದೊಡ್ಡ ಗುಣಲಬ್ಧ ಒದಗುವಂತೆಯೇ ಒಬ್ಬೊಬ್ಬನಾಗಿ ಉಪವಾಸ ಆಚರಿಸುವುದರಿಂದ ಲಭಿಸುವ ನೈತಿಕ ಹಾಗೂ ಆಧ್ಯಾತ್ಮಿಕ ಪ್ರಯೋಜನಗಳು ಲಕ್ಷಾ ವಧಿ ಮತ್ತು ಕೋಟ್ಯಾವಧಿ ಜನರು ಒಟ್ಟಿಗೆ ಆಚರಿಸುವಾಗ ಲಕ್ಷಾವಧಿ ಮತ್ತು ಕೋಟ್ಯಾವಧಿ ಪಟ್ಟು ವೃದ್ಧಿಸುತ್ತದೆ.

ರಮಝಾನ್ ತಿಂಗಳು ಇಡೀ ವಾತಾವರಣದಲ್ಲಿ ಒಳಿತು ಮತ್ತು ಧರ್ಮನಿಷ್ಠೆಯ ಸ್ಫೂರ್ತಿ ತುಂಬಿ ತುಳುಕುತ್ತದೆ. ಇಡೀ ಸಮುದಾಯದಲ್ಲಿ ಧರ್ಮನಿಷ್ಠೆಯ ಹೊಲವು ಹಚ್ಚ ಹಸಿರಾಗುತ್ತದೆ. ಪ್ರತಿಯೊಬ್ಬನೂ ಪಾಪಗಳಿಂದ ಪಾರಾಗಲು ಶ್ರಮಿ ಸುತ್ತಾನೆ. ಅವನಲ್ಲೇನಾದರೂ ದೋಷಗಳುಂಟಾದರೆ, ಅವನಂತೆಯೇ ಉಪವಾಸ ದಿಂದಿರುವ ಇತರ ಸಹೋದರರು ಅದನ್ನು ತಿದ್ದಿಕೊಳ್ಳಲು ಅವನಿಗೆ ಸಹಕಾರಿಗಳಾ ಗುತ್ತಾರೆ. ಪ್ರತಿಯೊಬ್ಬನೂ ಉಪವಾಸವಿದ್ದುಕೊಂಡು ಪಾಪ ಕಾರ್ಯವನ್ನೆಸಗಲು ನಾಚಿಕೆ ಪಡುತ್ತಾನೆ. ಏನಾದರೊಂದು ಸತ್ಕಾರ್ಯ ಮಾಡೋಣವೆಂಬ ಆಸಕ್ತಿ ಎಲ್ಲರಲ್ಲೂ ತಾನಾಗಿಯೇ ಉದ್ಭವಿಸುತ್ತದೆ. ಬಡವನಿಗೆ ಉಣಿಸಬೇಕು, ಗತಿಹೀನನಿಗೆ ಉಡಿಸಬೇಕು, ಕಷ್ಟದಲ್ಲಿದ್ದವರಿಗೆ ಸಹಾಯ ಮಾಡಬೇಕು, ಎಲ್ಲಾದರೂ ಸತ್ಕಾರ್ಯ ಗಳಾಗುತ್ತಿದ್ದರೆ ಅವುಗಳಲ್ಲಿ ಪಾಲುಗೊಳ್ಳಬೇಕು, ಎಲ್ಲಾದರೂ ಬಹಿರಂಗವಾಗಿ ಕೆಡುಕು ನಡೆಯುತ್ತಿದ್ದರೆ ಅವುಗಳನ್ನು ತಡೆಯಬೇಕು ಎಂದು ಭಾವಿಸಿ, ಅದರಂತೆ ಕಾರ್ಯೋನ್ಮುಖರಾದಾಗ ಸದಾಚಾರ ಮತ್ತು ಧರ್ಮನಿಷ್ಠೆಯ ಒಂದು ಸಾರ್ವತ್ರಿಕ ವಾತಾವರಣವೇ ನಿರ್ಮಾಣವಾಗುತ್ತದೆ. ಪ್ರತಿಯೊಂದು ಧಾನ್ಯವೂ ತನಗೆ ಅನುಕೂಲಕರ ವಾತಾವರಣ ಸಿಕ್ಕಿದಾಗ ಫಲಿಸಿ, ಎಲ್ಲೆಲ್ಲೂ ಆವರಿ ಸುವಂತೆಯೇ ಒಳಿತುಗಳು ಫಲ ಕೊಡುವ ಈ ಸುಗ್ಗಿಯ ಕಾಲದಲ್ಲಿ ಅವು ಎಲ್ಲೆಡೆ ಹಬ್ಬಿಕೊಂಡಿರುತ್ತದೆ.

ಆದುದರಿಂದಲೇ ಒಂದು ಹದೀಸಿನಲ್ಲಿ ಪ್ರವಾದಿಯವರು(ಸ), "ಮಾನವನ

ಪ್ರತಿಯೊಂದು ಕರ್ಮವೂ ತನ್ನ ಬಳಿ ಒಂದು ನಿರ್ದಿಷ್ಟ ಪ್ರಮಾಣದಲ್ಲಿ ವೃದ್ಧಿಯಾಗುತ್ತದೆ. ಒಂದೊಂದು ಪುಣ್ಯಕಾರ್ಯವು ಹತ್ತರಿಂದ ಏಳ್ನೂರು ಪಟ್ಟು ವರೆಗೆ ವೃದ್ಧಿಸುತ್ತದೆ. ಆದರೆ, ಉಪವಾಸವು ಇದರಿಂದ ಹೊರತಾಗಿದೆ. ಅದು ನನಗಾಗಿ ಮಾತ್ರ ಆಚರಿಸಲ್ಪಡುವುದರಿಂದ ನಾನು ಇಚ್ಛಿಸಿದಷ್ಟು ಪ್ರತಿಫಲವನ್ನು ಅದಕ್ಕಾಗಿ ನೀಡುವೆನು ಎಂದು ಅಲ್ಲಾಹ್ ಹೇಳಿರುತ್ತಾನೆ" ಎಂದಿರುವರು.

ಈ ಹದೀಸಿನಿಂದ ತಿಳಿದು ಬರುವುದೇನೆಂದರೆ ಒಬ್ಬ ಸತ್ಕರ್ಮಿಯ ಸಂಕಲ್ಪ ಮತ್ತು ಪರಿಣಾಮಗಳ ಪ್ರಮಾಣಕ್ಕನುಸಾರ ಎಲ್ಲಾ ಕರ್ಮಗಳು ವೃದ್ಧಿಸುತ್ತವೆ ಮತ್ತು ಅವುಗಳ ವೃದ್ಧಿಗೆ ಒಂದು ಮೇರೆಯಿದೆ. ಆದರೆ ಉಪವಾಸದ ಕರ್ಮಫಲದ ವೃದ್ಧಿಗೆ ಯಾವ ಮೇರೆಯೂ ಇಲ್ಲ. ರಮಝಾನ್ ತಿಂಗಳು ಒಳಿತು ಸಮೃದ್ಧಿಗಳ ಸುಗ್ಗಿಯ ಕಾಲ. ಈ ಕಾಲದಲ್ಲಿ ಒಬ್ಬೊಬ್ಬರಲ್ಲ; ಲಕ್ಷಾವಧಿ, ಕೋಟ್ಯಾವಧಿ ಮುಸ್ಲಿಮರು ಈ ಸತ್ಕರ್ಮಗಳ ಉದ್ಯಾನಕ್ಕೆ ಒಟ್ಟಾಗಿ ನೀರೆರೆಯುವುದರಿಂದ ಅದು ಲೆಕ್ಕವಿಲ್ಲದಷ್ಟು ವೃದ್ಧಿಯಾಗಬಲ್ಲುದು. ಎಷ್ಟು ಪ್ರಾಮಾಣಿಕತೆಯಿಂದ ಈ ತಿಂಗಳಲ್ಲಿ ಸತ್ಕರ್ಮ ಮಾಡುವಿರೋ ಅದರ ಸಮೃದ್ಧಿಯಿಂದ ನೀವೂ ಪ್ರಯೋಜನ ಪಡೆದು ಇತರ ಬಂಧುಗಳಿಗೂ ಅದರ ಪ್ರಯೋಜನವನ್ನೊದಗಿಸುವಿರೋ ಮತ್ತು ಈ ತಿಂಗಳ ಪ್ರಭಾವವನ್ನು ಉಳಿದ ಹನ್ನೊಂದು ತಿಂಗಳುಗಳಲ್ಲಿ ಎಷ್ಟು ಹೆಚ್ಚು ಉಳಿಸಿಕೊಳ್ಳುವಿರೋ ಅಷ್ಟೇ ಹೆಚ್ಚಾಗಿ ಇದು ಫಲದಾಯಕವಾಗುವುದು. ಇದರ ಅಭಿವೃದ್ಧಿಗೆ ಮಿತಿಯೆಂಬುದೇ ಇಲ್ಲ. ನೀವು ನಿಮ್ಮ ಕರ್ಮಗಳಿಂದ ಅದನ್ನು ಸೀಮಿತಗೊಳಿಸಿದರೆ ಅದು ನಿಮ್ಮದೇ ಅಪರಾಧವಾಗಿರುವುದು.

## ಇಬಾದತ್‌ಗಳ ಸತ್ಪರಿಣಾಮ ಈಗ ಎಲ್ಲಿದೆ?

ಉಪವಾಸದ ಪ್ರಭಾವ ಮತ್ತು ಅದರ ಸತ್ಪರಿಣಾಮಗಳ ಈ ವಿವರಣೆಯನ್ನು ಕೇಳಿ 'ಇವೆಲ್ಲಾ ಈಗ ಎಲ್ಲಿದೆ? ನಾವು ಉಪವಾಸ ವ್ರತವನ್ನೂ ಆಚರಿಸುತ್ತಿದ್ದೇವೆ. ನಮಾಝನ್ನೂ ಮಾಡುತ್ತಿದ್ದೇವೆ. ಆದರೆ ನೀವು ವಿವರಿಸಿದ ಪರಿಣಾಮಗಳೇಕೆ ಗೋಚರಿಸುವುದಿಲ್ಲ' ಎಂದು ನಿಮ್ಮಲ್ಲಿ ಪ್ರತಿಯೋರ್ವನೂ ಪ್ರಶ್ನಿಸಬಹುದು. ಅದರ ಕಾರಣವನ್ನು ನಾನು ಮೊದಲೇ ವಿವರಿಸಿದ್ದೇನೆ. ಇಸ್ಲಾಮಿನ ಯಂತ್ರ ಭಾಗಗಳನ್ನು ಪ್ರತ್ಯೇಕಿಸಿ, ಅವುಗಳ ಸ್ಥಾನದಲ್ಲಿ ಇತರ ಅನೇಕ ಬಿಡಿ ಭಾಗಗಳನ್ನು ಸೇರಿಸಿದ ಬಳಿಕ, ಪೂರ್ಣರೂಪದಲ್ಲಿದ್ದಾಗ ಪ್ರಕಟವಾಗುವಂತಹ ಸತ್ಪರಿಣಾಮಗಳನ್ನು ನೀವು ನಿರೀಕ್ಷಿಸು ವಂತಿಲ್ಲ. ಎರಡನೆಯದಾಗಿ, ಇಬಾದತ್‌ನ ಬಗ್ಗೆ ನಿಮ್ಮ ದೃಷ್ಟಿಕೋನವೇ ಬದಲಾಗಿ ಬಿಟ್ಟಿದೆ. ನೀವೀಗ ಮುಂಜಾವಿನಿಂದ ಸಂಜೆಯ ತನಕ ತಿನ್ನದೆ ಕುಡಿಯದೆ ಇರುವುದನ್ನು ಇಬಾದತ್ ಎಂದೂ ಅವುಗಳನ್ನು ಮಾಡಿಬಿಟ್ಟರೆ ನಿಮ್ಮ

ಇಬಾದತ್ ಪೂರ್ತಿ ಗೊಂಡಿತೆಂದೂ ಭಾವಿಸುತ್ತೀರಿ. ಇದೇ ರೀತಿಯಲ್ಲಿ ಇತರ ಇಬಾದತ್‌ಗಳ ಬಾಹ್ಯ ರೂಪಗಳನ್ನು ಮಾತ್ರ ನೀವು ಇಬಾದತ್ ಎಂದು ಭಾವಿಸಿದ್ದೀರಿ. ನಿಮ್ಮ ಆಚಾರಗಳಲ್ಲಿರಬೇಕಾದ ಇಬಾದತ್‌ನ ನೈಜ ಸ್ಫೂರ್ತಿಯಿಂದ ನಿಮ್ಮಲ್ಲಿ ಶೇಕಡಾ 99ಕ್ಕಿಂತ ಅಧಿಕ ಮಂದಿ ಬೋಧರಹಿತರಾಗಿದ್ದಾರೆ. ಆದ್ದರಿಂದಲೇ ಈ ಇಬಾದತ್‌ಗಳು ನಿಮಗೆ ಪೂರ್ಣ ಪ್ರಯೋಜನ ನೀಡುವುದಿಲ್ಲ. ಏಕೆಂದರೆ ಇಸ್ಲಾಮಿನಲ್ಲಿ ಎಲ್ಲವೂ ಸಂಕಲ್ಪ, ಜ್ಞಾನ ಮತ್ತು ವಿವೇಕವನ್ನು ಅವಲಂಬಿಸಿರುತ್ತದೆ.

ಅಲ್ಲಾಹನಿಚ್ಛಿಸಿದರೆ ಮುಂದಿನ ಉಪನ್ಯಾಸದಲ್ಲಿ ಈ ವಿಷಯವನ್ನೇ ವಿವರಿಸುವೆನು.



# ಉಪವಾಸದ ನೈಜ ಉದ್ದೇಶ

## ಪ್ರತಿಯೊಂದು ಕಾರ್ಯಕ್ಕೆ ಒಂದು ಉದ್ದೇಶವಿರುತ್ತದೆ

ಮುಸ್ಲಿಮ್ ಬಾಂಧವರೇ,

ಮಾನವನು ಮಾಡುವ ಪ್ರತಿಯೊಂದು ಕಾರ್ಯದಲ್ಲಿ ಅನಿವಾರ್ಯವಾಗಿ ಎರಡು ವಿಷಯಗಳಿರುತ್ತದೆ. ಒಂದು ಆ ಕಾರ್ಯದ ಉದ್ದೇಶ. ಇನ್ನೊಂದು ಆ ಉದ್ದೇಶಪ್ರಾಪ್ತಿಗಾಗಿ ಅನುಸರಿಸುವ ಕಾರ್ಯ ವಿಧಾನ. ಉದಾ: 'ಊಟ ಮಾಡುವ ಕ್ರಿಯೆಯನ್ನು' ತೆಗೆದುಕೊಳ್ಳೋಣ. ಜೀವಂತವಾಗಿರುವುದು ಮತ್ತು ದೇಹಕ್ಕೆ ಶಕ್ತಿ ಗಳಿಸುವುದು ಊಟ ಮಾಡುವುದರ ಉದ್ದೇಶ. ಈ ಉದ್ದೇಶ ಪ್ರಾಪ್ತಿ ಗಾಗಿ ನೀವು ಕೈಯಲ್ಲಿ ಆಹಾರದ ತುತ್ತನ್ನು ಮಾಡಿ ಬಾಯೊಳಗೆ ಇಡುತ್ತೀರಿ ಮತ್ತು ಹಲ್ಲುಗಳಿಂದ ಜಗಿದು, ಗಂಟಲಿನೊಳಗೆ ಇಳಿಸುತ್ತೀರಿ. ಆ ಉದ್ದೇಶ ಪ್ರಾಪ್ತಿಗೆ ಸೂಕ್ತವಾದ ಕಾರ್ಯರೂಪ ಇದೇ ಬಆಗಿರುವುದರಿಂದ ಈ ಕ್ರಮವನ್ನನುಸರಿಸುತ್ತೀರಿ. ಇಲ್ಲಿ ಉಣ್ಣುವ ಉದ್ದೇಶ ಮುಖ್ಯವಾಗಿದೆಯೇ ಹೊರತು ಉಣ್ಣುವ ಕಾರ್ಯವಿಧಾನ ವಲ್ಲವೆಂಬುದನ್ನು ನೀವು ಬಲ್ಲಿರಿ. ಒಬ್ಬನು ಮರದ ಪುಡಿ, ಬೂದಿ ಅಥವಾ ಮಣ್ಣಿನ ತುತ್ತನ್ನು ಬಾಯಿಯೊಳಗಿಟ್ಟು, ಹಲ್ಲುಗಳಿಂದ ಜಗಿದು, ಗಂಟಲಿನಿಂದ ಕೆಳಗಿಳಿಸಿದರೆ, ಅವನ ಕುರಿತು ನೀವೇನನ್ನುವಿರಿ? ಅವನ ತಲೆ ಕೆಟ್ಟಿದೆ ಎಂದೇ ಹೇಳುವಿರಷ್ಟೆ- ಏಕೆಂದರೆ, ಆ ಮೂರ್ಖನು ಉಣ್ಣುವ ಉದ್ದೇಶವನ್ನು ಅರಿಯುವುದಿಲ್ಲ. ಅವನು ಉಣ್ಣುವ ಈ ನಾಲ್ಕು ತೋರಿಕೆಯ ಕಾರ್ಯಗಳನ್ನು ನೆರವೇರಿಸಿ ಬಿಡುವುದನ್ನೇ 'ಉಣ್ಣುವುದು' ಎಂಬ ಭ್ರಮೆಯಲ್ಲಿ ಸಿಲುಕಿದ್ದಾನೆ.

ಇದೇ ರೀತಿಯಲ್ಲಿ ಊಟ ಮಾಡಿದೊಡನೆ ಗಂಟಲಿನೊಳಗೆ ಬೆರಳು ಹಾಕಿ ತಿಂದುದನ್ನೆಲ್ಲಾ ವಾಂತಿ ಮಾಡುತ್ತಾ ತಾನು ದಿನೇ ದಿನೇ ಕೃಶನೂ ದುರ್ಬಲನೂ ಆಗುತ್ತಾ ಹೋಗುತ್ತಿರುವೆನೆಂದೂ ಊಟದಿಂದ ಲಭಿಸುತ್ತದೆನ್ನಲಾಗುವ ಪ್ರಯೋಜನ ವೇನೂ ತನಗೆ ಸಿಗುತ್ತಿಲ್ಲವೆಂದೂ ದೂರುವಾತನನ್ನು ನೀವು ಹುಚ್ಚನೆನ್ನುವಿರಿ. ಈ ಮೂರ್ಖನು ತನ್ನ ಕ್ಷೀಣತೆಯ ಅಪವಾದವನ್ನು ಊಟದ ಮೇಲೆ ಹೊರಿಸುತ್ತಾನೆ.

ವಾಸ್ತವದಲ್ಲಿ ಮೂರ್ಖತನ ಅವನಿಂದಲೇ ಆಗಿದೆ. ಅವನು ತನ್ನ ಮೌಢ್ಯದಿಂದಾಗಿ ಉಣ್ಣುವ ಕೆಲವು ಬಾಹ್ಯ ಕ್ರಿಯೆಗಳನ್ನು ಮಾತ್ರ ಮಾಡಿಬಿಟ್ಟರೆ ಬದುಕುವ ಶಕ್ತಿ ಬರುವುದೆಂದು ಭಾವಿಸಿಕೊಂಡಿದ್ದಾನೆ. ಆದುದರಿಂದ ಅವನು "ಇನ್ನೇಕೆ ನಾನು ನನ್ನ ಜಠರದಲ್ಲಿ ಅನ್ನದ ಹೊರೆಯನ್ನಿರಿಸಿಕೊಳ್ಳಬೇಕು? ಹೊಟ್ಟೆಯನ್ನು ಹಗುರ ಮಾಡಿಕೊಳ್ಳಲಿಕ್ಕಾಗಿ ಅದನ್ನೇಕೆ ಹೊರಗೆ ಹಾಕಿಕೊಳ್ಳಬಾರದು? ನಾನಂತೂ ಉಣ್ಣುವ ಕ್ರಿಯೆಗಳನ್ನು ಮಾಡಿರುತ್ತೇನೆ" ಎಂದು ಭಾವಿಸಿದನು.

ಈ ಮೂಢ ಭಾವನೆಯನ್ನಿಟ್ಟು ಅದರಂತೆ ನಡೆದರೆ ಅದರ ಶಿಕ್ಷೆಯನ್ನೂ ಅವನೇ ಅನುಭವಿಸಬೇಕಷ್ಟೆ. ಆಹಾರವು ಜಠರದೊಳಗೆ ಹೋಗಿ, ಜೀರ್ಣವಾಗಿ ರಕ್ತಗತವಾಗಿ, ಇಡೀ ದೇಹಕ್ಕೆ ಹಬ್ಬುವ ವರೆಗೆ ತನಗೆ ಜೀವಶಕ್ತಿ ಬರಲಾರದೆಂದು ಅವನು ತಿಳಿದಿರಬೇಕಿತ್ತು. ಉಣ್ಣುವ ಬಾಹ್ಯ ಕ್ರಿಯೆಗಳೂ ಅಗತ್ಯ. ಈ ಕ್ರಿಯೆಗಳ ಹೊರತು ಆಹಾರವು ಜಠರವನ್ನು ಸೇರಲಾರದು. ಆದರೆ, ಈ ಬಾಹ್ಯ ಕ್ರಿಯೆ ಗಳಿಂದ ಮಾತ್ರ ಕೆಲಸ ಸಾಗದು. ಈ ಕ್ರಿಯೆಗಳನ್ನು ಮಾಡಿಬಿಟ್ಟೊಡನೆ ಮನುಷ್ಯನ ರಕ್ತನಾಳಗಳಲ್ಲಿ ರಕ್ತಸಂಚಾರವಾಗ ತೊಡಗಬೇಕಾದರೆ ಅದೇನೂ ಪವಾಡವಲ್ಲ. ರಕ್ತದ ಉತ್ಪತ್ತಿಗೆ ಅಲ್ಲಾಹನು ನಿಶ್ಚಯಿಸಿರುವ ನಿಯಮ ಪ್ರಕಾರವೇ ಅದು ಆಗು ವುದು. ಈ ನಿಯಮವನ್ನು ಮುರಿದರೆ ನೀವೇ ಅಳಿಯುವಿರಿ.

## ಬಾಹ್ಯರೂಪಗಳನ್ನೇ ವಾಸ್ತವವೆಂದು ತಿಳಿಯುವುದರ ದುಷ್ಪರಿಣಾಮ

ಇಷ್ಟು ವಿವರವಾಗಿ ನಿಮ್ಮ ಮುಂದಿಟ್ಟ ಈ ಉದಾಹರಣೆಯ ಬಗ್ಗೆ ನೀವು ಯೋಚಿಸಿದಾಗ ಇಂದಿನ ನಿಮ್ಮ ಇಬಾದತ್‌ಗಳು ಏಕೆ ಸತ್ವಹೀನವಾಗಿವೆಯೆಂಬುದು ನಿಮಗೆ ಮನವರಿಕೆಯಾಗಬಹುದು. ಹಿಂದೆ ಹಲವು ಬಾರಿ ಹೇಳಿದಂತೆ ನಮಾಝ್ ಮತ್ತು ಉಪವಾಸಗಳ ವ್ಯಕ್ತ ರೂಪಗಳನ್ನೇ ನಿಜವಾದ ಇಬಾದತ್ ಎಂದು ತಿಳಿದು ಕೊಂಡು, ಅವುಗಳನ್ನು ಪೂರ್ಣವಾಗಿ ನೆರವೇರಿಸಿ ಬಿಟ್ಟವನು ಅಲ್ಲಾಹನ ಇಬಾದತ್ ಮಾಡಿಬಿಟ್ಟನೆಂದು ನೀವು ತಪ್ಪಾಗಿ ಭಾವಿಸುತ್ತೀರಿ. ಊಟ ಮಾಡುವುದಕ್ಕೆ ಸಂಬಂಧಿಸಿ ದಂತೆ ತುತ್ತು ಮಾಡುವುದು, ಬಾಯೊಳಗೆ ಇಡುವುದು, ಜಗಿಯುವುದು ಮತ್ತು ನುಂಗುವುದು ಎಂಬ ಈ ನಾಲ್ಕು ಕ್ರಿಯೆಗಳನ್ನು ಒಟ್ಟಾಗಿ ಊಟವೆಂದೂ ಅವುಗಳನ್ನು ನೆರವೇರಿಸಿದೊಡನೆ ಊಟ ಮಾಡಿಯಾಯಿತೆಂದೂ ಈ ಕ್ರಿಯೆಗಳೊಂದಿಗೆ ಕಲ್ಲು ಮಣ್ಣನ್ನೇ ತಿಂದರೂ ಅಥವಾ ತಿಂದ ಮರುಕ್ಷಣದಲ್ಲೇ ವಾಂತಿ ಮಾಡಿಬಿಟ್ಟರೂ ಇದರಿಂದ ಊಟ ಮಾಡುವ ಉದ್ದೇಶ ಪ್ರಾಪ್ತಿಯಾಗಲೇ ಬೇಕೆಂದು ಭಾವಿಸುವವನನ್ನು ನೀವೂ ಹೋಲುತ್ತೀರಿ. ನೀವು ನಿಜವಾಗಿಯೂ ಇಂತಹ ಮೌಢ್ಯಕ್ಕೊಳಗಾಗಲಿಲ್ಲ ವೆಂದಾದರೆ, ಮುಂಜಾವಿನಿಂದ ಸಂಜೆಯ ತನಕವೂ ಅಲ್ಲಾಹನ ಇಬಾದತ್‌ನಲ್ಲಿ

ನಿರತನಾಗಿರುವ ಉಪವಾಸಿಗನು ತನ್ನ ಇಬಾದತ್‌ನ ವೇಳೆಯಲ್ಲೇ ಸುಳ್ಳು ಹೇಳುವುದಾದರೂ ಹೇಗೆ? ಹಿಂದಾಡುವುದು ಮತ್ತು ಮಾತು ಮಾತಿಗೂ ಜಗಳಾಡುವುದು ಹೇಗೆ? ಅವನ ಬಾಯಿಯಿಂದ ಬೈಗುಳಗಳು ಹೊರಡುವುದು ಹೇಗೆ? ಅವನು ಇತರರ ಹಕ್ಕನ್ನು ಕಬಳಿಸುವುದು ಹೇಗೆ? ಹರಾಮ್ ಉಣ್ಣುವ ಮತ್ತು ಉಣಿಸುವ ಕೆಲಸಗಳನ್ನು ಮಾಡುವುದಾದರೂ ಹೇಗೆ? ಮಾತ್ರವಲ್ಲ, ಇಷ್ಟೆಲ್ಲಾ ದುಷ್ಕೃತ್ಯಗಳನ್ನು ಎಸಗಿಯೂ ತಾನು ದೇವಾರಾಧನೆ ಮಾಡಿದ್ದೇನೆಂದು ಭಾವಿಸುವುದು ಹೇಗೆ? ಅವನು ಬೂದಿ ಅಥವಾ ಮಣ್ಣು ತಿನ್ನುವ ಹಾಗೂ ಊಟದ ಬಾಹ್ಯ 4 ಕ್ರಿಯೆಗಳನ್ನು ನೆರವೇರಿಸಿ ಅದನ್ನು ಊಟವೆಂದು ಭಾವಿಸುವವನಿಗೆ ಸಮಾನನಲ್ಲವೇ?

## ರಮಝಾನ್ ತಿಂಗಳ ನಂತರ ಪುನಃ ಬಂಧಮುಕ್ತತೆ

ರಮಝಾನ್ ತಿಂಗಳಿಡೀ ಸುಮಾರು 360 ತಾಸುಗಳ ದೇವಾರಾಧನೆಯನ್ನು ಮುಗಿಸಿದ ಬಳಿಕ ಅದರ ಪೂರ್ಣ ಪ್ರಭಾವವು ಶವ್ವಾಲ್ ತಿಂಗಳ ಪ್ರಥಮ ದಿನದಂದೇ ಅಳಿದು ಹೋಗಲು ಕಾರಣವೇನೆಂದು ನನಗೆ ಹೇಳಬಲ್ಲಿರಾ? ಅನ್ಯ ಸಮುದಾಯದವರು ತಮ್ಮ ಹಬ್ಬ ಹರಿದಿನಗಳಲ್ಲಿ ಏನೆಲ್ಲ ಮಾಡುತ್ತಾರೋ ಅದನ್ನೇ ಹಬ್ಬದ ದಿನ ನೀವೂ ಮಾಡುತ್ತೀರಿ. ನಗರಗಳಲ್ಲಂತೂ ಈದ್‌ನ (ಹಬ್ಬದ) ದಿನ ವ್ಯಭಿಚಾರ, ಮದ್ಯಪಾನ ಜೂಜಾಟಗಳಂತಹ ನೀಚ ಕಾರ್ಯಗಳು ನಡೆಯುತ್ತವೆ. ರಮಝಾನ್ ತಿಂಗಳಲ್ಲಿ ಹಗಲು ಉಪವಾಸವಿದ್ದು ರಾತ್ರಿ ಮದ್ಯಪಾನ ಮತ್ತು ವ್ಯಭಿಚಾರ ಮಾಡುವಂತಹ ದುರ್ವ್ಯಸನಿಗಳನ್ನು ನಾನು ಕಂಡಿದ್ದೇನೆ. ಸುದೈವವಶಾತ್ ಮುಸ್ಲಿಮ್ ಜನ ಸಾಮಾನ್ಯರು ಅಷ್ಟು ಕೆಟ್ಟು ಹೋಗಿಲ್ಲವಾದರೂ ರಮಝಾನ್ ಮುಗಿದೊಡನೆ ಈದ್‌ನ ಮರುದಿನ ಧರ್ಮನಿಷ್ಠೆಯ ಕುರುಹು ಎಷ್ಟು ಮಂದಿಯಲ್ಲಿ ಉಳಿದಿರುತ್ತದೆ? ಅಲ್ಲಾಹನ ಆಜ್ಞೋಲ್ಲಂಘನೆಯನ್ನು ಎಷ್ಟರ ಮಟ್ಟಿಗೆ ತೊರೆಯಲಾಗುತ್ತದೆ? ಸತ್ಕರ್ಮಗಳಲ್ಲಿ ಎಷ್ಟರ ಮಟ್ಟಿಗೆ ಪಾಲ್ಗೊಳ್ಳಲಾಗುತ್ತದೆ? ಸ್ವಾರ್ಥ ಎಷ್ಟು ಕಡಿಮೆ ಯಾಗುತ್ತದೆ?

## ಇಬಾದತ್‌ನ ಕುರಿತು ತಪ್ಪಾದ ಕಲ್ಪನೆಯ ಪರಿಣಾಮ

ಇದಕ್ಕೆ ಕಾರಣವೇನಿರಬಹುದೆಂದು ಯೋಚಿಸಿರಿ. ವಾಸ್ತವದಲ್ಲಿ ನೀವು ಇಬಾದತ್‌ನ ಅರ್ಥ ತಾತ್ಪರ್ಯಗಳನ್ನೇ ತಪ್ಪಾಗಿ ತಿಳಿದಿರುತ್ತೀರಿ. ಮುಂಜಾವಿನಿಂದ ಸಂಜೆಯ ತನಕ ತಿನ್ನದೆ-ಕುಡಿಯದೆ ಇರುವುದನ್ನು ಉಪವಾಸ ಮತ್ತು ಇಬಾದತ್ ಎಂದು ನೀವು ಭಾವಿಸುತ್ತೀರಿ. ಆದುದರಿಂದ ಉಪವಾಸವನ್ನು ನೀವು ಸರಿಯಾಗಿ ಪಾಲಿಸುತ್ತೀರಿ. ಯಾವುದಾದರೊಂದು ವಸ್ತುವಿನ ಸೇವನೆಯಿಂದ ಉಪವಾಸ ಮುರಿದು ಹೋದೀತೆಂಬ ಸಂದೇಹವುಂಟಾದರೂ ಅದರಿಂದ ದೂರವಿರುವಷ್ಟರ

ಮಟ್ಟಿಗೆ ನಿಮ್ಮಲ್ಲಿ ದೇವಭಯವಿರುತ್ತದೆ. ಪ್ರಾಣವೇ ಹೋಗುತ್ತದೆಂದಾದರೂ ಉಪವಾಸ ಬಿಡಲು ನೀವು ಸಿದ್ಧರಾಗುವುದಿಲ್ಲ. ಆದರೆ ಹೀಗೆ ಹಸಿವು, ಬಾಯಾರಿಕೆಯಿಂದಿರುವುದು ನಿಜವಾದ ಇಬಾದತ್ ಆಗಿರದೆ ಅದು ಇಬಾದತ್‌ನ ಸ್ವರೂಪ ಮಾತ್ರವೆಂಬುದನ್ನು ನೀವು ತಿಳಿದಿಲ್ಲ. ನಿಮ್ಮಲ್ಲಿ ದೇವಭಯ ಮತ್ತು ದೇವಪ್ರೇಮವುಂಟಾಗಬೇಕೆಂದೂ ಒಂದು ವಿಷಯದಲ್ಲಿ ಎಷ್ಟೇ ಲೌಕಿಕ ಪ್ರಯೋಜನಗಳಿದ್ದರೂ ಅದರಿಂದ ಅಲ್ಲಾಹನ ಮೆಚ್ಚುಗೆ ಲಭಿಸದೆಂದು ತಿಳಿದಾಗ ನಿಮ್ಮ ಆಕಾಂಕ್ಷೆಗಳನ್ನು ಅದುಮಿ ಅದರಿಂದ ದೂರವಿರಲು ಹಾಗೂ ಒಂದು ವಿಷಯದಲ್ಲಿ ಎಂತಹ ಅಪಾಯ–ನಷ್ಟಗಳು ಕಂಡು ಬಂದರೂ ಅದರಲ್ಲಿ ಅಲ್ಲಾಹನ ಸಂಪ್ರೀತಿಯಿದೆಯೆಂದು ತಿಳಿದಾಗ ನಿಮ್ಮ ಮನಸ್ಸನ್ನು ಬಲವಂತವಾಗಿ ನಿಯಂತ್ರಿಸಿ ಅದಕ್ಕೆ ಸಿದ್ಧಪಡಿಸಲು ಇಬಾದತ್‌ನ ಈ ಸ್ವರೂಪವನ್ನು ನಿಶ್ಚಯಿಸಲಾಗಿದೆ. ನೀವು ಉಪವಾಸದ ನೈಜ ಉದ್ದೇಶವನ್ನು ಅರಿತಿರುತ್ತಿದ್ದರೆ, ತಿಂಗಳಿಡೀ ದೇವಭಯ ಮತ್ತು ದೇವ ಪ್ರೇಮದಿಂದ ನಿಮ್ಮ ಮನಸ್ಸನ್ನು ಚಿತ್ತಾಕಾಂಕ್ಷೆಗಳಿಂದ ತಡೆದು ಅಲ್ಲಾಹನ ಮೆಚ್ಚುಗೆಯ ಪ್ರಕಾರ ನಡೆಸಿದ ಅಭ್ಯಾಸದಿಂದ ಪ್ರಯೋಜನ ಪಡೆಯುತ್ತಿದ್ದರೆ, ನಿಮ್ಮಲ್ಲಿ ಆ ಶಕ್ತಿ ಸಾಮರ್ಥ್ಯಗಳುಂಟಾಗುತ್ತಿದ್ದುವು. ಆದರೆ ನೀವು ರಮಝಾನ್ ಮುಗಿದೊಡನೆಯೇ ಈ ಸಾಧನೆಯನ್ನೂ ಇದರಿಂದ ಗಳಿಸಿಕೊಂಡ ಗುಣ ವಿಶೇಷಗಳನ್ನೂ ಊಟ ಮಾಡಿದೊಡನೆ ಗಂಟಲಿನೊಳಕ್ಕೆ ಕೈ ಹಾಕಿ ವಾಂತಿ ಮಾಡಿ ಬಿಡುವಂತೆಯೇ ಹೊರಗೆಸೆದು ಬಿಡುತ್ತೀರಿ. ಇಷ್ಟೇ ಅಲ್ಲ, ನಿಮ್ಮ ಪೈಕಿ ಕೆಲವರಂತೂ ಉಪವಾಸ ಬಿಟ್ಟೊಡನೆ ಇಡೀ ದಿನದ ಧರ್ಮನಿಷ್ಠೆಯನ್ನು ಉಗುಳಿ ಬಿಡುತ್ತಾರೆ. ಪರಿಸ್ಥಿತಿ ಹೀಗಿರುವಾಗ, ಉಪವಾಸದ ಬಾಹ್ಯ ರೂಪಗಳನ್ನು ಪೂರ್ತಿ ಗೊಳಿಸಿದೊಡನೆ ಉಪವಾಸದಿಂದ ಸಿಗಬೇಕಾದ ಶಕ್ತಿ ಸಾಮರ್ಥ್ಯ ಸಿಗಬೇಕೆಂದರೆ, ರಮಝಾನ್ ಮತ್ತು ಅದರ ಉಪವಾಸಗಳು ಪವಾಡವೇನೂ ಅಲ್ಲ. ಆಹಾರವು ಜಠರವನ್ನು ಸೇರಿ, ಜೀರ್ಣವಾಗಿ, ರಕ್ತಗತವಾಗುವ ವರೆಗೆ ಶಕ್ತಿ ಒದಗದಂತೆಯೇ ಉಪವಾಸದ ನೈಜ ಉದ್ದೇಶವನ್ನರಿಯದೆ ಮತ್ತು ಅದು ನಿಮ್ಮ ಮನ ಮಸ್ತಿಷ್ಕಗಳ ಆಳಕ್ಕಿಳಿಯಲು ಹಾಗೂ ನಿಮ್ಮ ಯೋಚನೆ, ಸಂಕಲ್ಪ, ನಿರ್ಧಾರ ಮತ್ತು ಕರ್ಮಗಳ ಮೇಲೆ ಆವರಿಸಿಕೊಳ್ಳಲು ಅವಕಾಶ ಒದಗಿಸದೆ ಉಪವಾಸದಿಂದಲೂ ನಿಮಗೆ ಆಧ್ಯಾತ್ಮಿಕ ಬಲ ಸಿಗಲಾರದು.

## ಉಪವಾಸ: ಧರ್ಮನಿಷ್ಠನಾಗುವ ಮಾರ್ಗ

ಈ ಕಾರಣದಿಂದಲೇ ಅಲ್ಲಾಹನು ಉಪವಾಸದ ಆಜ್ಞೆ ಕೊಟ್ಟ ಬಳಿಕ 'ಲ ಅಲ್ಲಕುಮ್ ತತ್ತಕೂನ್' ಅರ್ಥಾತ್ 'ನೀವು ಧರ್ಮನಿಷ್ಠರಾಗಬಹುದೆಂದು ನಿರೀಕ್ಷಿಸಿ'

ನಿಮಗೆ ಉಪವಾಸವನ್ನು ಕಡ್ಡಾಯಗೊಳಿಸಲಾಗಿದೆ ಎಂದಿರುವನು. ಈ ಆಯತ್‌ನಲ್ಲಿ ನೀವು ಖಂಡಿತವಾಗಿಯೂ ಮುತ್ತಕೀ(ಧರ್ಮನಿಷ್ಠ)ಗಳಾಗುವಿರೆನ್ನಲಿಲ್ಲ. ಏಕೆಂದರೆ ಉಪವಾಸದ ಈ ಪರಿಣಾಮವು ಮನುಷ್ಯನ ಬುದ್ಧಿವಂತಿಕೆ ಮತ್ತು ಸತ್ಸಂಕಲ್ಪಗಳನ್ನು ಅವಲಂಬಿಸಿದೆ. ಅದರ ಉದ್ದೇಶವನ್ನು ತಿಳಿದುಕೊಂಡು, ಅದರ ಸಹಾಯದಿಂದ ನೈಜ ಉದ್ದೇಶ ಪ್ರಾಪ್ತಿಗಾಗಿ ಪ್ರಯತ್ನಿಸುವಾತನು ಒಂದಿಷ್ಟಾದರೂ ಮುತ್ತಕೀ (ಧರ್ಮನಿಷ್ಠ) ಆಗುವನು.

ಆದರೆ ಉದ್ದೇಶವನ್ನೇ ತಿಳಿಯದೆ ಮತ್ತು ಅದರ ಪ್ರಾಪ್ತಿಗಾಗಿ ಶ್ರಮಿಸದೆ ಇರುವಾತನಿಗೆ ಯಾವ ಪ್ರಯೋಜನವೂ ಸಿಗಲಾರದು.

## ಉಪವಾಸದ ನೈಜ ಉದ್ದೇಶ

ಪ್ರವಾದಿಯವರು(ಸ) ವಿವಿಧ ರೀತಿಯಿಂದ ಉಪವಾಸದ ನೈಜ ಉದ್ದೇಶದ ಕಡೆಗೆ ಗಮನ ಸೆಳೆದಿದ್ದಾರೆ. ಅದನ್ನು ಕಡೆಗಣಿಸಿ ಹಸಿವು ಬಾಯಾರಿಕೆಯಿಂದ ಇರುವುದರಿಂದ ಏನೂ ಪ್ರಯೋಜನವಿಲ್ಲವೆಂದು ಹೇಳಿದ್ದಾರೆ.

## 1. ಸುಳ್ಳಿನಿಂದ ಪಾರಾಗುವುದು

ಪ್ರವಾದಿಯವರು(ಸ) ಹೀಗೆಂದಿರುವರು:

"ಒಬ್ಬನು ಸುಳ್ಳಾಡುವುದನ್ನೂ ಸುಳ್ಳು ವ್ಯವಹಾರ ಮಾಡುವುದನ್ನೂ ಬಿಡದಿದ್ದರೆ ಅವನು ಆಹಾರ ಪಾನೀಯಗಳನ್ನು ಬಿಡಬೇಕೆಂಬ ಅಪೇಕ್ಷೆ ಅಲ್ಲಾಹನಿಗೆ ಇಲ್ಲ."

ಇನ್ನೊಂದು ಹದೀಸಿನಲ್ಲಿ ಹೀಗಿದೆ:

"ಉಪವಾಸದಿಂದ ಹಸಿವು ಬಾಯಾರಿಕೆಗಳ ಹೊರತು ಇನ್ನೇನೂ ಗಳಿಸದ ಅದೆಷ್ಟೋ ಉಪವಾಸಿಗರಿದ್ದಾರೆ. ರಾತ್ರಿ ಜಾಗರಣೆಯ ಹೊರತು ಬೇರೇನೂ ಲಭಿಸದ ಅದೆಷ್ಟೋ ಆರಾಧಕರಿದ್ದಾರೆ."

ಈ ಎರಡೂ ಹದೀಸ್‌ಗಳ ತಾತ್ಪರ್ಯ ಸುಸ್ಪಷ್ಟವಾಗಿದೆ. ಕೇವಲ ಹಸಿವು ಮತ್ತು ಬಾಯಾರಿಕೆಯಿಂದ ಇರುವುದು ಇಬಾದತ್ ಆಗಿರದೆ ಅವು ಇಬಾದತ್‌ನ ಮಾಧ್ಯಮವಾಗಿದೆ. ದೇವಭಯದಿಂದಾಗಿ ಅವನ ಆಜ್ಞೋಲ್ಲಂಘನೆ ಮಾಡದಿರುವುದು, ಅವನ ಪ್ರೇಮದಿಂದಾಗಿ ಅವನ ಸಂತುಷ್ಟಿ ಇರುವ ಕಡೆಗೆ ಧಾವಿಸುವುದು ಮತ್ತು ವಿಷಯಲಂಪಟತನದಿಂದ ಸಾಧ್ಯವಿರುವಷ್ಟು ದೂರವಿರುವುದು ನಿಜವಾದ ಇಬಾದತ್ ಆಗಿದೆ. ಈ ಇಬಾದತ್‌ನಿಂದ ಅಲಕ್ಷ್ಯನಾಗಿರುವಾತನು ತನ್ನ ಹೊಟ್ಟೆಗೆ ವೃಥಾ ಹಸಿವು ಬಾಯಾರಿಕೆಗಳ ತ್ರಾಸ ಕೊಡುತ್ತಾನೆ. ಅಲ್ಲಾಹನಿಗೆ ಅವನಿಂದ 12–14 ತಾಸುಗಳ ತನಕ ಅನ್ನ–ಪಾನೀಯಗಳನ್ನು ಬಿಡಿಸುವ ಅಗತ್ಯವಾದರೂ ಏನಿದೆ?

## 2. ಸತ್ಯವಿಶ್ವಾಸ (ಈಮಾನ್) ಮತ್ತು ಆತ್ಮಾವಲೋಕನ (ಇಹ್ತಿಸಾಬ್)

ಪ್ರವಾದಿಯವರು(ಸ) ಉಪವಾಸದ ನೈಜ ಉದ್ದೇಶದ ಕಡೆಗೆ ಈ ರೀತಿ ಗಮನ ಸೆಳೆದಿದ್ದಾರೆ, 'ಈಮಾನ್' (ವಿಶ್ವಾಸ) ಮತ್ತು 'ಇಹ್ತಿಸಾಬ್'(ಆತ್ಮಾವಲೋಕನ) ಗಳೊಂದಿಗೆ ಉಪವಾಸವಿರುವಾತನ ಗತ ಪಾಪಗಳೆಲ್ಲವೂ ಕ್ಷಮಿಸಲ್ಪಡುವುವು.

'ಈಮಾನ್' ಎಂದರೆ, ಅಲ್ಲಾಹನ ಬಗ್ಗೆ ಓರ್ವ ಮುಸ್ಲಿಮನಲ್ಲಿರಬೇಕಾದ ವಿಶ್ವಾಸವನ್ನು ಪೂರ್ಣ ರೀತಿಯಿಂದ ಮನಸ್ಸಿನಲ್ಲಿ ಜಾಗೃತವಾಗಿರಿಸುವುದು. 'ಇಹ್ತಿಸಾಬ್' ಎಂದರೆ, ಮಾನವನು ಅಲ್ಲಾಹನ ಸಂಪ್ರೀತಿಯನ್ನು ಬಯಸುವುದು, ತನ್ನ ವಿಚಾರ ಆಚಾರಗಳು ಯಾವಾಗಲೂ ಅಲ್ಲಾಹನ ಪ್ರಸನ್ನತೆಗೆ ವ್ಯತಿರಿಕ್ತವಾಗಿರದಂತೆ ನೋಡಿ ಕೊಳ್ಳುವುದು. ಇವೆರಡರೊಂದಿಗೆ ರಮಝಾನಿನ ಎಲ್ಲಾ ದಿನಗಳಲ್ಲಿ ಉಪವಾಸ ವಿರುವಾತನು ತನ್ನ ಗತ ಪಾಪಗಳಿಗೆ ಕ್ಷಮೆ ಹೊಂದುವನು. ಹೇಗೆಂದರೆ, ಅವನು ಎಂದಾದರೂ ದ್ರೋಹಿ ಅಥವಾ ಅವಿಧೇಯ ದಾಸನಾಗಿದ್ದರೆ, ಈಗ ಅವನು ತನ್ನ ಒಡೆಯನ ಮುಂದೆ ಸಂಪೂರ್ಣ ಶರಣಾಗತನಾಗಿರುತ್ತಾನೆ. "ಪಾಪಗಳಿಗಾಗಿ ಪಶ್ಚಾತ್ತಾಪ ಪಡುವಾತನು ಪಾಪಗಳನ್ನೇ ಮಾಡದವನಂತಿರುತ್ತಾನೆ" ಎಂದು ಹದೀಸಿನಲ್ಲಿದೆ.

## 3. ಕೆಡುಕಿನಿಂದ ರಕ್ಷಿಸುವ ಗುರಾಣಿ

ಇನ್ನೊಂದು ಹದೀಸಿನಲ್ಲಿ ಹೀಗಿದೆ, "ಉಪವಾಸವು ಗುರಾಣಿಯಾಗಿದೆ. (ಗುರಾಣಿಯು ಶತ್ರುವಿನ ಆಕ್ರಮಣದಿಂದ ರಕ್ಷಿಸುವಂತೆಯೇ ಉಪವಾಸವೂ ಶೈತಾನನ ಆಕ್ರಮಣದಿಂದ ರಕ್ಷಿಸುತ್ತದೆ.) ಆದ್ದರಿಂದ ಉಪವಾಸವಿರುವಾತನು (ಈ ಗುರಾಣಿಯನ್ನು ಉಪಯೋಗಿಸಿ) ಜಗಳ ಗಲಾಟೆಗಳಿಂದ ದೂರವಿರಬೇಕು. ಆತನನ್ನು ಯಾರಾದರೂ ಬೈದರೆ ಅಥವಾ ಅವನೊಡನೆ ಜಗಳಕ್ಕೆ ಬಂದರೆ, ಸಹೋದರಾ, ನಾನು ಉಪವಾಸದಲ್ಲಿದ್ದೇನೆ (ನಿನ್ನಂತೆಯೇ ನಾನೂ ವರ್ತಿಸುವೆನೆಂದು ನೀನು ನಿರೀಕ್ಷಿಸಬೇಡ) ಎಂದು ತಪ್ಪಿಸಿಕೊಳ್ಳಬೇಕು."

## 4. ಒಳಿತಿನ ಕಾರ್ಯದಲ್ಲಿ ಆಸಕ್ತಿ

ಮಾನವನು ಉಪವಾಸದ ವೇಳೆ ಅತ್ಯಧಿಕ ಪುಣ್ಯ ಕಾರ್ಯಗಳನ್ನು ಮಾಡ ಬೇಕು. ಒಳಿತಿನ ಕಾರ್ಯದಲ್ಲಿ ಆಸಕ್ತಿ ಹೊಂದಿರಬೇಕು, ಮುಖ್ಯವಾಗಿ ಅವನ ಹೃದಯದಲ್ಲಿ ಅವನ ಇತರ ಬಂಧುಗಳ ಮೇಲೆ ಅತ್ಯಧಿಕ ಸಹಾನುಭೂತಿ ಉಂಟಾ ಗಬೇಕು ಎಂದು ಮುಂತಾಗಿ ಇತರ ಹದೀಸ್‌ಗಳಲ್ಲಿ ಬಂದಿರುತ್ತದೆ. ಏಕೆಂದರೆ, ಅವನು ಸ್ವತಃ ಹಸಿವು ಬಾಯಾರಿಕೆಗಳ ಕಷ್ಟಗಳನ್ನನುಭವಿಸುವ ಮೂಲಕ ಅಲ್ಲಾಹನ ಇತರ ದಾಸರ ಬಡತನ–ಸಂಕಷ್ಟಗಳ ಅನುಭವವನ್ನು ಚೆನ್ನಾಗಿ ಪಡೆದುಕೊಂಡಿರುತ್ತಾನೆ.

ಹಝ್ರತ್ ಇಬ್ನು ಅಬ್ಬಾಸ್‌ರವರು(ರ) ಹೀಗೆ ಉಲ್ಲೇಖಿಸುತ್ತಾರೆ. "ಪ್ರವಾದಿವರ್ಯರು(ಸ) ರಮಝಾನ್ ತಿಂಗಳಲ್ಲಿ ಇತರ ದಿನಗಳಿಗಿಂತಲೂ ಅತ್ಯಧಿಕ ಕರುಣಾಳುವೂ ಪ್ರೇಮ ಮಯಿಯೂ ಆಗಿರುತ್ತಿದ್ದರು. ಅವರ ಮನೆ ಬಾಗಿಲಿನಿಂದ ಯಾವ ಯಾಚಕನೂ ಬರಿಗೈಯಿಂದ ಮರಳುತ್ತಿರಲಿಲ್ಲ. ಆ ತಿಂಗಳಲ್ಲಿ ಯಾವ ಕೈದಿಯೂ ಸೆರೆಯಲ್ಲಿರುತ್ತಿರಲಿಲ್ಲ.

## 5. ಇಫ್ತಾರ್ (ಉಪವಾಸ ಪಾರಣೆ) ಮಾಡಿಸುವುದರ ಪ್ರತಿಫಲ)

ಇನ್ನೊಂದು ಹದೀಸಿನಲ್ಲಿ ಪ್ರವಾದಿಯವರು(ಸ) ಹೀಗೆ ನುಡಿದಿರುತ್ತಾರೆ:

"ರಮಝಾನಿನಲ್ಲಿ ಉಪವಾಸಿಗನೊಬ್ಬನಿಗೆ ಇಫ್ತಾರ್ (ಉಪವಾಸ ಪಾರಣೆ) ಮಾಡಿಸಿದರೆ ಆ ಸತ್ಕಾರ್ಯವು ಅವನ ಪಾಪಗಳ ಪ್ರಾಯಶ್ಚಿತ್ತ ಹಾಗೂ ಅವನ ಕೊರಳನ್ನು ನರಕಾಗ್ನಿಯ ಶಿಕ್ಷೆಯಿಂದ ವಿಮೋಚನೆಗೊಳಿಸುವ ಸಾಧನವಾಗುವುದು. ಇಫ್ತಾರ್ ಮಾಡಿಸಿದವನಿಗೂ ಉಪವಾಸವಿದ್ದವನಿಗೆ ದೊರೆತ ಪುಣ್ಯದಷ್ಟೇ ಪುಣ್ಯ ಲಭಿಸುವುದು. ಉಪವಾಸವಿದ್ದವನ ಪುಣ್ಯದಿಂದ ಏನನ್ನೂ ಕಡಿತಗೊಳಿಸಲಾಗದು."

